# ಸಿದ್ಧಗಂಗಾ



ಜನವರಿ, 1976

# ವ್ಯವಸಾಯ ಮತ್ತು ಕೈಗಾರಿಕಾ

## ವಸ್ತು ಪ್ರದರ್ಶನ

1976

ಶ್ರೀ ಸಿದ್ಧಗಂಗಾ ಕ್ಷೇತ್ರ :: 572131–ತುಮಕೂರು ಜಿಲ್ಲೆ.

---

**1976 ನೇ ಫೆಬ್ರುವರಿ 21 ನೇ ತಾರೀಖಿನಿಂದ ಪ್ರಾರಂಭವಾಗಿ ಸುಮಾರು ಮೂರು ವಾರಗಳು ನಡೆಯಲಿದೆ**

---

ನಮ್ಮ ವಸ್ತು ಪ್ರದರ್ಶನವು ಪ್ರತಿವರ್ಷವೂ ನಡೆಯುವ ಶಿವರಾತ್ರಿ ಜಾತ್ರೆಯ ಅಂಗವಾಗಿ ಹಳೆಯ ವಿದ್ಯಾರ್ಥಿಗಳ ಸಂಘ, ಶ್ರೀ ಸಿದ್ಧಗಂಗಾ ಗುರುಕುಲ ಇದರ ವತಿಯಲ್ಲಿ ನಡೆಯಲ್ಪಡುತ್ತದೆ. ಸಾವಿರಾರು ಮಂದಿ ಯಾತ್ರಾರ್ಥಿಗಳನ್ನೂ ಹಾಗೂ ಸಾರ್ವಜನಿಕರನ್ನೂ ಆಕರ್ಷಿಸುತ್ತದೆ. ರಾಜ್ಯ ಮತ್ತು ಕೇಂದ್ರ ಸರ್ಕಾರದ ನಾನಾ ಇಲಾಖೆಗಳು ಹಾಗೂ ಅನೇಕ ಖಾಸಗಿ ಸಂಸ್ಥೆಗಳು ಭಾಗವಹಿಸುತ್ತವೆ. ಎಲ್ಲಾ ವಸ್ತು ಪ್ರದರ್ಶನಗಳೂ. ಮನರಂಜನೆಗಾಗಿ ನಗರ ಪ್ರದೇಶಗಳಲ್ಲಿಯೇ ಜರುಗುತ್ತಿರುವಾಗ ಗ್ರಾಮೀಣ ಬಂಧುಗಳ ಶಿಕ್ಷಣಕ್ಕಾಗಿ ಗ್ರಾಮಾಂತರ ಪ್ರದೇಶದಲ್ಲಿ ಏಕೈಕವಾಗಿ ನಡೆಯುತ್ತಿರುವುದು ನಮ್ಮ ಈ ವಸ್ತು ಪ್ರದರ್ಶನದ ವೈಶಿಷ್ಟ್ಯ.

ಪ್ರತಿ ದಿನ ಸಂಜೆ ಪ್ರಖ್ಯಾತ ಚಲನ ಚಿತ್ರ ನಟನಟಿಯರಿಂದ ನಾಟಕ, ಸಂಗೀತ ಮೊದಲಾದ ಮನರಂಜನಾ ಕಾರ್ಯಕ್ರಮಗಳನ್ನು ಉಪಯುಕ್ತ ವಿಷಯಗಳ ಮೇಲೆ ಚಲನಚಿತ್ರ ಪ್ರದರ್ಶನಗಳನ್ನು ಏರ್ಪಡಿಸಿರುತ್ತೆ.

ವಾಣಿಜ್ಯ–ಕೈಗಾರಿಕೆ ಹಾಗೂ ಖಾಸಗಿ ಉದ್ಯಮಗಳು ವಸ್ತು ಪ್ರದರ್ಶನದಲ್ಲಿ ಭಾಗವಹಿಸಲು ವಿಶೇಷ ಸೌಲಭ್ಯಗಳನ್ನು ಒದಗಿಸಲಾಗುವುದು

ನಿಮ್ಮ ಸ್ಟಾಲುಗಳನ್ನು ಇಂದೇ ಕಾದಿರಿಸಿ.

ಹೆಚ್ಚಿನ ವಿವರಗಳಿಗೆ ಕಾರ್ಯದರ್ಶಿಯವರಿಗೆ ಬರೆಯಿರಿ.

ಶ್ರೀ ಶಿವಕುಮಾರ ಸ್ವಾಮಿಗಳು

ಅಧ್ಯಕ್ಷರು

# 'ಸಿದ್ಧಗಂಗಾ'

ಜನವರಿ, ೧೯೭೬

ಸಂಪುಟ–೧೨ ಸಂಚಿಕೆ–೧


ಮುಖ ಪುಟ

ಗಗನ ಚುಂಬಿತ ಉತ್ತುಂಗ ಗಿರಿ ಶಿವಗಂಗಾ
ಕಗ್ಗಲ್ಲ ಬಸಿರಿಂದ ಮೈತಳೆದು ನಿಂತ ಶಿವಲಿಂಗ

( ಫೋಟೋ — ಶ್ರೀ ಎಂ. ಆರ್. ಗುಬ್ಬಣ್ಣ )


ಪ್ರಕಾಶಕರು
ಹಳೆಯ ವಿದ್ಯಾರ್ಥಿ ಸಂಘದ ಪರವಾಗಿ
ಹೆಚ್. ಬಿ. ಗಂಗಾಧರಯ್ಯ

ಸಂಪಾದಕರು
ಪಂ|| ಚನ್ನಪ್ಪ ಎರೇಸೀಮೆ
ಕೆ. ಜಿ. ರಂಗಯ್ಯ

ಜಾಹೀರಾತು ವ್ಯವಸ್ಥಾಪಕರು
ಎಂ. ರೇಣುಕಾರಾಧ್ಯ

ಹಂಚಿಕೆಯ ವ್ಯವಸ್ಥಾಪಕರು
ಎಸ್. ಗಂಗರುದ್ರಪ್ಪ

ಮುದ್ರಕರು
ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಮುದ್ರಣಾಲಯ

ಪ್ರಕಟನೆಯ ಸ್ಥಳ
ಶ್ರೀ ಸಿದ್ಧಗಂಗಾ ಕ್ಷೇತ್ರ


## ಶ್ರೀವಾಣಿ

ಇಂದು ಧರ್ಮಶ್ರದ್ಧೆ ಕ್ಷೀಣಿಸುತ್ತಿದೆ ಎಂಬ ಮಾತು ಸರ್ವತ್ರ ಕೇಳಿಬರುತ್ತಿದೆ. ಈ ಆಕ್ಷೇಪಣೆಯ ಸತ್ಯಾಸತ್ಯಗಳ ಪರಿಶೀಲನೆ ಅಗತ್ಯವಾಗಿದೆ. ಧರ್ಮಶ್ರದ್ಧೆ ಕಡಿಮೆಯಾಗುತ್ತಿರುವುದು ಪ್ರಧಾನವಾಗಿ ಎರಡು ರೂಪದಲ್ಲಿ ವಿಶ್ಲೇಷಿಸಲ್ಪಡುತ್ತದೆ. ಒಂದು ಗುಂಪಿನ ಜನಾಂಗ ಮುಗ್ಧರು; ಅನರಕ್ಷರಸ್ತ ಬಂಧುಗಳು. 'ಧರ್ಮ' ಎಂಬುದನ್ನು ಅರ್ಥಮಾಡಿಕೊಳ್ಳುವ ಸಾಮರ್ಥ್ಯವಿಲ್ಲದವರು. ಈ ಬಗೆಯ ಜನತೆ ಧರ್ಮದತ್ತ ಒಲವು ಉಳ್ಳವರಾಗಿದ್ದರೂ, ಅದೊಂದು ಅದ್ಭುತವಾದ ಜೀವನ ವಿಧಾನ. ಅತ್ಯಂತ ಕ್ಲಿಷ್ಟವಾದ ತತ್ವ. ಜನಸಾಮಾನ್ಯರಿಗೆ ಎಟುಕದ ಒಂದು ಮಹಾನ್ ಸ್ಥಳ ಇತ್ಯಾದಿಯಾದ ತಪ್ಪುಕಲ್ಪನೆ ಉಳ್ಳವರಾಗಿದ್ದಾರೆ. ಈ ಭಾವನೆಯ ಬಂಧನದಲ್ಲಿ ಸಿಲುಕಿ ಧರ್ಮವನ್ನು ಅರ್ಥಮಾಡಿಕೊಳ್ಳುವ, ಪ್ರಯತ್ನವನ್ನೇ ಅವರು ಮಾಡಿಲ್ಲ. ಇನ್ನೊಂದು ಗುಂಪಿನ ಜನ ಸುಶಿಕ್ಷಿತರು. ವೈಚಾರಿಕತೆಯುಳ್ಳವರು. ಆಲೋಚನಾಪರರು. ಧರ್ಮದ ಸ್ವರೂಪವನ್ನು ಅರ್ಥಮಾಕೊಳ್ಳಬಲ್ಲವರು. ದುರ್ದೈವವಶಾತ್ ಈ ಬಗೆಯ ಜನತೆ ಧರ್ಮದ ಬಗ್ಗೆ ಉದಾಸೀನ ಭಾವವನ್ನು ತಳೆದಿದ್ದಾರೆ. ಧರ್ಮದ ಬಗ್ಗೆ ಯಾವುದೇ ತೆರನಾದ ಆಸ್ಥೆಯುಳ್ಳವರಾಗಿಲ್ಲ; ಮಾತ್ರವಲ್ಲ ಧರ್ಮದಲ್ಲಿನ ಇತರೆಯವರ ನಂಬಿಕೆಯನ್ನು ಸಡಿಲಗೊಳಿಸುತ್ತಿದ್ದಾರೆ. ಇದು ದೇಶಕ್ಕೆ, ಇಡೀ ಮಾನವ ಜನಾಂಗಕ್ಕೇ ಅಪಾಯಕಾರಿ. ಮೊದಲನೇ ಗುಂಪಿನ ಅರಿಯದ ಮುಗ್ಧಜನತೆಗೆ ಧರ್ಮ ಬೋಧಕರು ಒಂದು ವಿಷಯವನ್ನು ಸಾರಿ ಸಾರಿ ಹೇಳಬೇಕು. ಒತ್ತಾಯವಾಗಿ ತಿಳಿಸಬೇಕು. ಆ ಬಗ್ಗೆ ಅವರಲ್ಲಿ ವಿಶ್ವಾಸ ಮೂಡಿಸುವುದಾಗಬೇಕು. ಯಾವುದು ಆ ವಿಷಯ? ಧರ್ಮವು ನಿತ್ಯ ಜೀವನದಿಂದ ಹೊರತಲ್ಲ. ಸಾಮಾನ್ಯರ ಬದುಕಿನ ಬೆನ್ನೆಲುಬು. ಬೆಳಗಿನಿಂದ ಸಂಜೆಯವರೆಗೆ ಸಾಗುವ, ಈ ಸಮಾಜದ ಆಗುಹೋಗುಗಳ ಜೀವಾಳ ಧರ್ಮ. ವ್ಯಕ್ತಿ ತಾನು ತನ್ನ ವೃತ್ತಿಯಲ್ಲಿ ಅಳವಡಿಸಿಕೊಂಡು ಹಸನಾಗಿ ಬಾಳಲು ಸಹಕರಿಸುವುದು ಧರ್ಮ. ಮಾನವ ಜೀವನವನ್ನು ಅದು ಅರ್ಥಪೂರ್ಣವನ್ನಾಗಿ ಮಾರ್ಪಡಿಸುತ್ತದೆ. ಮಾನವನ ಬದುಕಿಗೆ ಒಂದು ಗುರಿಯನ್ನು ತಂದುಕೊಡುತ್ತದೆ. ಅದರ ಅನುಸರಣೆಗೆ ಯಾವ ವಿಶೇಷ ತತ್ವಜ್ಞಾನವೂ ಬೇಕಿಲ್ಲ. ಅಧಿಕಾಧಿಕ ಅಧ್ಯಯನ ಅಗತ್ಯವಿಲ್ಲ. ಈ ವಿಚಾರ ಸ್ಪಷ್ಟವಾಗಬೇಕು. ಇನ್ನು ವಿಚಾರ ಶಕ್ತಿಯುಳ್ಳ ಗುಂಪು ಧರ್ಮದತ್ತ ಒಲವು ವಿಶ್ವಾಸಗಳನ್ನು ಬೆಳೆಸಿಕೊಳ್ಳಬೇಕು. ಆ ಬಗೆಗಿನ ತಮ್ಮ ಔದಾಸೀನ್ಯ ಮನೋಭಾವವನ್ನು ತೊಲಗಿಸುವತ್ತ ಶೀಘ್ರ ಶ್ರಮಿಸಬೇಕು. ಇದು ಮಾನವ ಕಲ್ಯಾಣಕ್ಕೆ ನಾಂದಿ.

—

## ಲೇಖಕರಲ್ಲಿ ಮನವಿ

'ಸಿದ್ಧಗಂಗಾ' ಮಾಸ ಪತ್ರಿಕೆಯು ಲೇಖಕರಿಂದ ವಿಚಾರಪ್ರಚೋದಕವಾದ ಲೇಖನಗಳನ್ನು ಸದಾ ಸ್ವಾಗತಿಸುತ್ತದೆ. ಲೇಖನಗಳು ಧರ್ಮ, ಸಂಸ್ಕೃತಿ, ಸಾಮಾಜಿಕ, ಐತಿಹಾಸಿಕ ಹಾಗೂ ಸ್ಥಳಮಹಾತ್ಮೆಗಳಿಗೆ ಸಂಬಂಧಿಸಿದವುಗಳಾದರೆ ಹೆಚ್ಚು ಆದ್ಯತೆ ನೀಡಲಾಗುವುದು. ಪ್ರಚಲಿತ ಸಾಮಾಜಿಕ ಜೀವನದ ಸಮಸ್ಯೆಗಳನ್ನು ಬಿಂಬಿಸುವ ಹಾಗೂ ಅವುಗಳಿಗೆ ಪರಿಹಾರ ಸೂಚಿಸುವ ಸಣ್ಣಕಥೆ, ಕವನ ಹಾಗೂ ಪ್ರಬಂಧಗಳಿಗೂ ಸ್ವಾಗತವುಂಟು. ಸ್ವೀಕೃತವಾದ ಲೇಖನಗಳಿಗೆ 'ಸಿದ್ಧಗಂಗಾ' ಆಗಿಂದಾಗ್ಗೆ ನಿಗದಿಮಾಡಿಕೊಳ್ಳುವ ಸಂಭಾವನೆಯನ್ನು ನೀಡಲಾಗುವುದು. ಲೇಖನಗಳನ್ನು ಸ್ಫುಟವಾಗಿ ಕಾಗದದ ಒಂದೇ ಮಗ್ಗುಲಲ್ಲಿ ಬರೆದು "ಸಂಪಾದಕರು, **'ಸಿದ್ಧಗಂಗಾ'** [ಕನ್ನಡ ಸಚಿತ್ರ ಮಾಸಿಕ] ಶ್ರೀ ಸಿದ್ಧಗಂಗಾ ಕ್ಷೇತ್ರ, ಕ್ಯಾತ್ಸಂದ್ರ–572121 ತುಮಕೂರು ಜಿಲ್ಲೆ". ಇವರಿಗೆ ಕಳುಹಿಸಿಕೊಡಬೇಕಾಗಿ ವಿನಂತಿ.

## ಪರಿವಿಡಿ



## ಚಂದಾ ಬಗ್ಗೆ ಸೂಚನೆ

ಚಂದಾ ಬಾಕಿಯಿರುವವರು ದಯವಿಟ್ಟು ಶೀಘ್ರವಾಗಿ ಎಂ. ಓ ಮೂಲಕ ಪ್ರಕಾಶಕರು, 'ಸಿದ್ಧಗಂಗಾ' [ಕನ್ನಡ ಸಚಿತ್ರ ಮಾಸಿಕ] ಶ್ರೀ ಸಿದ್ಧಗಂಗಾ ಕ್ಷೇತ್ರ ಕ್ಯಾತ್ಸಂದ್ರ– 572131 , ತುಮಕೂರು ಜಿಲ್ಲಾ.

ಈ ವಿಳಾಸಕ್ಕೆ ಕಳುಹಿಸಿಕೊಡುವುದರ ಮೂಲಕ ಎಂದಿನಂತೆ ಸಹಕರಿಸಬೇಕಾಗಿ ವಿನಂತಿ.

**ವಾರ್ಷಿಕ ಚಂದಾ : 10 ರೂ. ಗಳು, ಆಜೀವ ಸದಸ್ಯತ್ವ : 101 ರೂ. ಗಳು**

## ಆಲೋಚನಾಪರ

# ಭಿಕ್ಷಾಟನೆ ಅನಿವಾರ್ಯವೇ?

"ಹಸಿವಿನಲ್ಲೂ ಹಬ್ಬಾನೇ ..............."
"ಕಣ್ಣೀರೇಕೆ, ಬಿಸಿಯುಸಿರೇಕೆ ......................."
"ಶಿವಪ್ಪ ಕಾಯೋ ತಂದೆ..............................."
ಪರಿಚಯ ಇದ್ದ ಚಿತ್ರ ಗೀತೆಗಳ ಒಂದೊಂದು ಪಂಕ್ತಿ ಹಾಡುತ್ತಾ, ಇರುವ ಕಣ್ಣುಗಳನ್ನು ಅರೆಮುಚ್ಚಿಕೊಂಡು "ಕಾಸೊಂದ ನೀಡಿ" ಎಂದು ಒರಲುತ್ತಾ ಬಸ್ಸಿಗೆ ಪ್ರವೇಶಿಸಿದ ಚಿಂದಿ ಬಟ್ಟೆಯ ಆ ಹುಡುಗ! ನಮ್ಮ ದೇಶದ ಕೋಟಿ ಕೋಟಿ ಭಿಕ್ಷುಕರ ಪ್ರತಿನಿಧಿ ಅಷ್ಟೆ ಇವನು. ಇದು ಅನೇಕರ ನಿತ್ಯದ ವೃತ್ತಿ. ಸೂರ್ಯೋದಯದೊಂದಿಗೇ ಆರಂಭವಾದರೆ, ಸೂರ್ಯಾಸ್ತಮವಾದ ಹಲವು ಘಂಟೆಗಳ ನಂತರವೇ ಇವರ ವೃತ್ತಿಯ ಮುಕ್ತಾಯ. ನೂರೆಂಟು ವಿಧದ ಈ ವೃತ್ತಿಯ ಪರಿಚಯ ಇಲ್ಲದವರಿಲ್ಲ. ಇವರಿಂದ ಕಾಡಿಸಿಕೊಂಡವರು ಬೇಡಿಸಿಕೊಂಡವರು ಈ ಬಗ್ಗೆ ಚಿಂತಿಸುತ್ತಾರೆ. ಇವರ ಈ ವೃತ್ತಿ ಇವರಿಗೆ ಅನಿವಾರ್ಯವೇ? ಬೇರೆ ಮಾರ್ಗವೇ ಇಲ್ಲವೆ?

ಪರಿಹಾರ ಕಾರ್ಯಗಳು ಸಾಕಷ್ಟು ನಡೆದಿವೆ. ಸಾರ್ವಜನಿಕ ರಂಗದಲ್ಲಿ ಈ ದಿಶೆಯಲ್ಲಿ ಸಹಸ್ರಾರು ಸಂಸ್ಥೆಗಳು ಕೆಲಸ ಮಾಡುತ್ತಿವೆ. ಕೊಡುಗೈ ದೊರೆಗಳು ಕೇವಲ ಕಾಡಿ ಬೇಡಿದಾಗ ಎರಡು ಪೈಸೆ ಎಸೆಯುವಷ್ಟರಲ್ಲಿ ತೃಪ್ತರಾಗದೆ ಹತ್ತಾರು ಮಂದಿ ಕೂಡಿ ಆಶ್ರಯಧಾಮಗಳನ್ನು ನಿರ್ಮಿಸಿದ್ದಾರೆ. ಅನಾಥ ಶಿಶುವಿಹಾರಗಳು ಲೆಕ್ಕವಿಲ್ಲದಷ್ಟಿವೆ. ಶಿಶು ಸಂರಕ್ಷಣೆಯೇ ಪುಣ್ಯ ಕಾರ್ಯವೆಂದು ಭಾವಿಸಿರುವ ನಮ್ಮ ಜನತೆ ಅನಾಥ ಶಿಶುಗಳನ್ನು ಅಕ್ಕರೆಯಿಂದ ಪಾಲಿಸುವ ಹೊಣೆ ಹೊರದೆ ಇಲ್ಲ. ಅಂಗಡಿಗೆ ಬಂದ ಮಹಿಳಾ ಗಿರಾಕಿ ಕಂಕುಳ ಕೂಸನ್ನು ಅಲ್ಲಿಯೇ ಬಿಟ್ಟು ಹೊರಟಾಗ ಮಾಲೀಕನ ಪತ್ನಿ ಆ ಮಗುವನ್ನು ಆಡಿಸಿ ಆನಂದಿಸುತ್ತಿದ್ದಾಳೆಂಬ ಪತ್ರಿಕಾ ವರದಿ ಈ ಅಂಶಕ್ಕೆ ಪುಷ್ಟಿ. ಎಳೆಯ ವಯಸ್ಸಿನಲ್ಲಿ ಸಣ್ಣಪುಟ್ಟ ಕಾರಣಗಳಿಗಾಗಿ ತನ್ನವರನ್ನು ದೂರ ಮಾಡಿದ ಪುಟಾಣಿಗಳು ಸಾಹಸಿಗರಾದರೆ ದರೋಡೆ ಆರಂಭಿಸುತ್ತಾರೆ. ಇಲ್ಲದಿದ್ದರೆ ಭಿಕ್ಷುಕರಾಗುತ್ತಾರೆ. ಒಮ್ಮೆ ಆ ವೃತ್ತಿಯ ಸವಿ ಸಿಕ್ಕಿ ಅದಕ್ಕೆ ಬಲಿಯಾದರೆ ಮತ್ತೆ ಬಿಡಲಾರರೆಂಬುದು ವರದಿಗಳ ಅಭಿಪ್ರಾಯ. ಸರ್ಕಾರ ಇವರ ಬಗ್ಗೆ ಎಚ್ಚರವಹಿಸಿದೆ. ಇವರನ್ನು ಉತ್ತಮ ಪ್ರಜೆಗಳನ್ನಾಗಿ ಮಾರ್ಪಡಿಸಲು ರಿಮ್ಯಾಂಡ್ ಹೋಂಗಳನ್ನು ತೆರೆದಿದೆ. ಬಡತನದ ಬೇಗೆಯಿಂದ ಹೊರಬಂದವರಿಗಿಂತಲೂ, ಶ್ರೀಮಂತ ಗೃಹಗಳಿಂದ ಸ್ವೇಚ್ಛಾಚಾರ, ಸ್ವತಂತ್ರಗಳನ್ನು ಬಯಸಿ ಹೊಸಿಲು ದಾಟಿದವರ ಸಂಖ್ಯೆ ಜಾಸ್ತಿ ಇರುವುದು ಗಮನಾರ್ಹ.

ಮಹಿಳಾವರ್ಷದ ಆಚರಣೆ ಅಬ್ಬರದಿಂದ ಸಾಗಿದ್ದರೂ ವಿಧವೆಯರು ನಿರ್ಗತಿಕರಾಗಿ, ದಿಕ್ಕಿಲ್ಲದವರಾಗಿ ಸಮಾಜದ ಪಾಲಾಗುತ್ತಾರೆ. ಇವರನ್ನು ಗೌರವಿಸಿ ಬಾಳಿಸುವ ವಾತಾವರಣ ಇನ್ನೂ ನಿರ್ಮಾಣವಾಗಿಲ್ಲವೆಂಬುದು ಕಟು ಸತ್ಯ. ಇವರ ಕೈ ಹಿಡಿದು ಸಮಾಜವನ್ನು ಎದುರಿಸುವ ಸಾಹಸಿಗ ಯುವಕರು ಈವರೆಗೆ ಅಧಿಕ ಸಂಖ್ಯೆಯಲ್ಲಿಲ್ಲ. ಇವರಿಗಾಗಿ ಹಲವಾರು ಆಶ್ರಮಗಳು ಶ್ರಮಿಸುತ್ತಿವೆ. ಕುಶಲ ಕೆಲಸಗಳಲ್ಲಿ ಅವರನ್ನು ತೊಡಗಿಸಲು ಯತ್ನಿಸುತ್ತಿವೆ. ಈ ದುರದೃಷ್ಟ ಸೋದರಿಯರ ಸಂಖ್ಯೆ ದಿನೇದಿನೇ ಹೆಚ್ಚುತ್ತಿರುವಾಗ ಇರುವ ಹಲಕೆಲವು ವಿಧವಾ ಗೃಹಗಳು ಏನೇನೂ ಸಾಲದಾಗಿವೆ. ಇಂತಹವರಿಗೆ ಮಕ್ಕಳಿದ್ದರಂತೂ ಅವರ ಪಾಡು ಹೇಳತೀರದಾಗುತ್ತದೆ. ಅಸಹಾಯಕ

ಸ್ಥಿತಿಯಲ್ಲಿರುವ ಇವರ ಆಸ್ತಿಪಾಸ್ತಿ ಮನೆಮಠಗಳನ್ನು ಮೋಸ ವಂಚನೆಗಳಿಂದ ಲಪಟಾಯಿಸುವ ಖದೀಮ ರನೇಕರೂ ಇರುತ್ತಾರೆ, ಇವರನ್ನೇ ಉದ್ಧರಿಸುವ ಸೋಗಿನಲ್ಲಿ ಎಲ್ಲವನ್ನೂ ಅಪಹರಿಸಿ ಅಟ್ಟಹಾಸದಿಂದ ಮೆರೆಯುವ ಈ ಘಾತುಕರು ಅವರ ಪಾಲಿಗೆ ಮೃತ್ಯು ದೇವತೆಗಳು. ಇವರ ಕೈ ಹಿಡಿತಕ್ಕೆ ಸಿಕ್ಕಿ ನರಳಿ ಎಲ್ಲ ವನ್ನೂ ಕಳೆದುಕೊಂಡು ಭಿಕ್ಷಾ ಪಾತ್ರೆಯನ್ನು ಆಶ್ರಯಿ ಸುವುದು ಇವರಿಗೆ ಅನಿವಾರ್ಯ.

ಜೀವನದ ದುರ್ಭರತೆ ನೀಡಿದ ಈ ವೃತ್ತಿ ಹಲ ವರ ಪಾಲಿಗಾದರೆ, ಮತ್ತೆ ಹಲವರಿಗೆ ಬಂಧನದಿಂದ ಬಂದು ಸೇರಿದ ಅನುಭವ. ಆಡುತ್ತಿದ್ದ ಮಕ್ಕಳು ನಾಪತ್ತೆಯಾಗಿ, ಅಂಗಾಂಗಗಳನ್ನು ಬಲಾತ್ಕಾರವಾಗಿ ಕಳೆದುಕೊಂಡು ಬೀದಿಗೆ ಬರುತ್ತಾರೆ. ದಿನಕ್ಕಿಷ್ಟು ಬೇಡಿ ಪಡೆದೇ ಬರಬೇಕೆಂಬ ನಿರ್ಬಂಧ ಹೊತ್ತು ಬಂದಿರು ತ್ತಾರೆ. ಈ ಆದೇಶ ಪೂರೈಸಲಾಗದಿದ್ದ ದಿನ ಛಡಿ ಏಟಿನ ಅನುಭವ ಆಗುವುದೆಂಬುದು ಅವರು ಹೇಳುವ ಕರುಳು ಕತ್ತರಿಸುವ ಕಥೆ. ನಗರ ಮಧ್ಯದ ಛತ್ರಗಳೇ ಇವರ ಠಾಣೆಗಳು. ಠಾಣೆಗಳಲ್ಲಿನ ಖದೀಮರು ನಡೆ ಸುವ ಈ ದುಷ್ಕೃತ್ಯಗಳು ಪೋಲೀಸರ ಕಣ್ಣಿಗೆ ಬರು ವವರೆಗೆ ನಿರಾತಂಕ. ಇವರನ್ನು ಕಂಡಲ್ಲಿ ಆ ಕೂಡಲೇ ಕಾನೂನಿನ ಬಿಗಿ ಮುಷ್ಟಿಗೆ ಒಪ್ಪಿಸುವ ಸಾರ್ವಜನಿ ಕರು ಬೇಕು. ಈ ಬಗ್ಗೆ ಜನತೆಗೆ ತಿಳುವಳಿಕೆ ನೀಡು ವುದು ಸೂಕ್ತ. ಪ್ರಚಾರ ಮಾಧ್ಯಮಗಳು ಇತ್ತ ಗಮನ ಹರಿಸುವುದಾದರೆ ಸುಗಮ.

ನಮ್ಮ ರಾಜ್ಯದ ಘನ ಸರ್ಕಾರದವರು ಈ ಭಿಕ್ಷಾ ವೃತ್ತಿಯನ್ನು ರಾಜಧಾನಿಯಿಂದ ನಿರ್ಮೂಲನ ಮಾಡಲು ಅಗತ್ಯವಾದ ಕಾನೂನು ಮಾಡಿರುವುದೂ, ಈ ಕಾರ್ಯ ಶೀಘ್ರ ನೆರವೇರುವಂತೆ ಒಂದು ಬೃಹತ್ ಯೋಜನೆ ಹಾಕಿಕೊಂಡಿರುವುದೂ ಸ್ವಾಗತಾರ್ಹ. ದೇಶದ ಇತರೇ ರಾಜ್ಯಗಳಿಗೆ ಇದು ಮಾದರಿ ಕೆಲಸ. ಗಲ್ಲಿ ಗಲ್ಲಿಗಳಲ್ಲಿ, ಹಾದಿ ಬೀದಿಗಳಲ್ಲಿ, ಗುಡಿಗಳಲ್ಲಿ ತುಂಬಿಹೋಗಿರುವ ಈ ನಿರ್ಭಾಗ್ಯ ಬಂಧುಗಳನ್ನು ಹೇಗೆ ಸುಧಾರಿಸಬೇಕು ? ಇವರನ್ನು ಹಿಡಿದು ಒಂದೆಡೆ ವ್ಯವಸ್ಥೆ ಮಾಡುವುದು ಸಾಧ್ಯವೇ? ಸಹಸ್ರಾರು ಕಲ್ಯಾಣಗೃಹಗಳೂ ಸಾಲದಾ ದಾವು. ನಿಯಮ-ನಿಯೋಗಗಳಿಂದ ಮಾತ್ರ ಸಾಧಿಸ- ಲಾಗುವ ಕೆಲಸವು ಇದಲ್ಲ. ಭಿಕ್ಷೆ ಬೇಡುವವರ ಸಂಖ್ಯೆ ಹೆಚ್ಚಲು ಕಾರಣರು ನೀಡುವವರು. ಈ ವೃತ್ತಿಯ ನಿರ್ಮೂಲನದಲ್ಲಿ ನೀಡುವವರ ಹೊಣೆಗಾರಿ ಕೆಯು ಮಹತ್ತರವಾದುದು. ಕಾಡಿದಾಗ ಕಂಗೆಟ್ಟು ಕೇಳಿದಾಗ ಮನಕರಗಿ ನೀಡುವ ಪುಡಿಪೈಸೆಗಳು ಬೇಡಿದವನ ಬಾಳನ್ನು ಬೆಳಗಲಾರವು. ಹೀಗೆ ನೀಡಿದ ಪ್ರತಿ ಪೈಸೆ, ಹಿಡಿ ಹಿಟ್ಟು ತಮಗೆ ಕೈಲಾಸ ತಂದೀತು ಎಂಬ ತಪ್ಪು ಕಲ್ಪನೆಯು ದೂರವಾಗಬೇಕು. ಅಂದ ಮಾತ್ರಕ್ಕೆ ಉಳ್ಳವರು ಕೊಡಬಾರದೆಂದೇನಿಲ್ಲ. ತಮ್ಮ ಉದಾರ ಕೊಡುಗೆಗಳನ್ನು ಸರ್ಕಾರಕ್ಕೆ ಸಲ್ಲಿಸಬಹುದು. ಸರ್ಕಾರದ ವತಿಯಿಂದ ವಿತರಣೆ ಸೂಕ್ತ. ಅನಾಥರಿ ಗಾಗಿ, ನಿರ್ಗತಿಕರಿಗಾಗಿ ಇರುವ ಸಂಘ ಸಂಸ್ಥೆಗಳ ಮೂಲಕ ಹಂಚಬಹುದು. ಅಲ್ಲಿ ಅವರವರ ಶಕ್ತ್ಯಾ ನುಸಾರ ದುಡಿಯುತ್ತಾರೆ. ಹೊಟ್ಟೆ ಹೊರೆಯುತ್ತಾರೆ. ತೃಪ್ತಿಯ ಜೀವನ ಸಾಗಿಸುತ್ತಾರೆ. ಜನ ಬಿಸುಡುವ ಪುಂಗಿನ ಹಣದಲ್ಲಿ ಬದುಕುತ್ತೇನೆಂಬ ಅಳುಕು ಅವರಿ ಗಿರದು. ಹಾದಿ ಬೀದಿಗಳಲ್ಲಿ ಕಾಡಿ ಬೇಡುತ್ತಾರೆಂಬ ಅಂಜಿಕೆ ಜನತೆಗಿರದು. —

"ಕೀರ್ತಿಯನ್ನು ಗಳಿಸುವುದು ಸುಲಭ.
ಆದರೆ ಅದನ್ನು ಅರಗಿಸಿಕೊಳ್ಳುವುದು ಕಷ್ಟ"

— ಸ್ವಾಮಿ ವಿವೇಕಾನಂದ.

# ಶ್ರೀ ನಿಜಗುಣ ಶಿವಯೋಗಿಗಳು

— ಶ್ರೀ ಎಸ್. ಭೂಸಕಡ್ಡಿ, ಎಂ.ಎ., ಬಿ.ಇಡಿ.

**ಸಾರ್ಥಕ ಜೀವನ ನಡೆಸಿದ**
**ಪುಣ್ಯ ಪುರುಷರು ಇವರು :**

ಭಾರತಮಾತೆಯ ತನುಜಾತೆಯಾದ ಕರ್ನಾಟಕ ಮಾತೆಯ ಪುಣ್ಯ ಗರ್ಭದಲ್ಲಿ ಜನ್ಮವೆತ್ತಿದ ಮಹಾನುಭಾವರಲ್ಲಿ ವೈರಾಗ್ಯ ಶಿರೋಮಣಿ ಶ್ರೀ ನಿಜಗುಣ ಶಿವಯೋಗಿಗಳು ಅಗ್ರಗಣ್ಯರು; ಅಗ್ರಮಾನ್ಯರು. ಮನಸ್ಸು ಮಾಡಿದರೆ ಮಾನವನು ತನ್ನ ಸಾಧನೆ -ಸಿದ್ಧಿಯಿಂದ ಮಹಾ ಮಾನವನಾಗಿ ದೇವಮಾನವನಾಗಬಲ್ಲನೆಂಬುದಕ್ಕೆ ಶ್ರೀ ನಿಜಗುಣ ಶಿವಯೋಗಿಗಳ ಪಾವನಮಯ ಪವಿತ್ರ ಜೀವನವೇ ಉತ್ತಮ ನಿದರ್ಶನ. ಕವಿಕುಲದಲ್ಲಿ ಕವೀಶ್ವರರಾಗಿ, ಸಂತರಲ್ಲಿ ಮಹಾ ಸಂತರಾಗಿ, ಪಂಡಿತರಲ್ಲಿ ಪಂಡಿತೋತ್ತಮರಾಗಿ, ಯೋಗ ಸಾಧನೆಯಲ್ಲಿ ಯೋಗೀಂದ್ರರಾಗಿ, ಶಿವಯೋಗಿಗಳಲ್ಲಿ ಶಿವಯೋಗಿ ಪುಂಗವರಾಗಿ, ಮಾನವ ಕುಲ ಪಾವನ ಮಾಡಿದ ಶ್ರೀ ನಿಜಗುಣ ಶಿವಯೋಗಿಗಳು ನಿಜವಾಗಿಯೂ ಕನ್ನಡ ನಾಡಿನ ಅದ್ಭುತ ವ್ಯಕ್ತಿಗಳೇ ಸರಿ. ಇ. ಪಿ. ರೈಸ್ ಅವರು ನಿಜಗುಣ ಶಿವಯೋಗಿಗಳು ಮಹಾ ವಿದ್ವಾಂಸರು, ಘನತರ ಗ್ರಂಥಕರ್ತರು ಎಂದು ಮನಸಾರೆ ಪ್ರಶಂಸಿಸಿದ್ದಾರೆ. ನಿಜಗುಣರು ಮಹಿಮಾ ಪುರುಷರು, ತತ್ವಜ್ಞಾನ ಕೋವಿದರೆಂದು ದಿವಂಗತ ರಾನಡೆಯವರು ಹೃದಯ ತುಂಬಿ ಬಣ್ಣಿಸಿದ್ದಾರೆ. ಕನ್ನಡ ಸಾಹಿತ್ಯಾಕಾಶದಲ್ಲಿ ಬೆಳಗುತ್ತಿರುವ ನಕ್ಷತ್ರ ಮಾಲಿಕೆಯಲ್ಲಿ ಇವರು ಧ್ರುವತಾರೆಯಂತೆ ವಿರಾಜಮಾನರಾಗಿದ್ದಾರೆ. ಅಗಾಧ ವಿದ್ವತ್ತೆಯಿಂದಲೂ ದೀರ್ಘ ತಪಶ್ಚರ್ಯದಿಂದಲೂ ಜ್ಞಾನದ ತುತ್ತತುದಿಯನ್ನೇರಿ ಸರಳವಾದ ತರತರದ ಗದ್ಯಪದ್ಯಗಳಲ್ಲಿ ಕನ್ನಡ ಜನಕ್ಕೆ ತಮ್ಮ ಅರಿವನ್ನು ಹಂಚಿಕೊಟ್ಟವರು ಎಂದ ಶ್ರೇಷ್ಠ ಸಾಹಿತ್ಯ ವಿಮರ್ಶಕರ ಮಾತುಗಳು ಮನನೀಯವಾಗಿವೆ.

ಶ್ರೀ ನಿಜಗುಣ ಶಿವಯೋಗಿಗಳ ಕಾಲಮಾನದ ಬಗೆಗೆ ಇಂದಿಗೂ ಚರ್ಚೆ ನಡೆಯುತ್ತಲೇ ಇದೆ. ಸದ್ಯದ ಮಟ್ಟಿಗೆ ಕವಿಚರಿತೆಕಾರರ ಅಭಿಪ್ರಾಯದಂತೆ ಅವರು ಹದಿನೈದನೆಯ ಶತಮಾನದವರೆಂದೇ ಇಟ್ಟುಕೊಳ್ಳಬೇಕಾಗಿದೆ. ಇವರು ಮೈಸೂರುಜಿಲ್ಲೆಯ ಕೊಳ್ಳೇಗಾಲ ತಾಲ್ಲೂಕಿನ ಚಿಲಕವಾಡಿ ಪ್ರದೇಶದ ಅರಸರಾಗಿದ್ದರು. ಶಿವಭಕ್ತರಾಗಿ, ಪ್ರಜಾ ಪ್ರೇಮಿಗಳಾಗಿ ಬಾಳಿದರು; ಬೆಳಗಿದರು. ಯಾವುದೇ ಜೀವನದ ನಿಮಿಷದಲ್ಲಿ ಬುದ್ಧನಂತೆ-ವೈರಾಗ್ಯವರಳಿ-ಶಂಭುಲಿಂಗನ ಬೆಟ್ಟದ ರಮ್ಯ ಮನೋಹರವಾದ ಪ್ರಶಾಂತವಾದ ಏಕಾಂತ ತಾಣದಲ್ಲಿ ಘನಘೋರ ತಪಸ್ಸು ಮಾಡಿ ಅಪಾರ ಪಾಂಡಿತ್ಯ ಪಡೆದರು. ಅವರ ಪ್ರತಿಭೆ ಗರಿಗೆದರಿ ಕನ್ನಡ ಸಾಹಿತ್ಯ ಸರಸ್ವತಿಯ ಅಡಿದಾವರೆಗಳಿಗೆ ಏಳು ಕೃತಿ ಕುಸುಮಗಳನ್ನು ಅರ್ಪಿಸಿ ಕೃತಾರ್ಥವಾಗಿದೆ. ಕನ್ನಡ ಸಾಹಿತ್ಯ ಲೋಕದ ಸೀಮಾಪುರುಷ ತಮ್ಮ ಮಹಾ ತಪದ ಫಲವನ್ನು ವಿಶ್ವಕ್ಕೆ ನೀಡಿ ತುಂಬು ಜೀವನ ಬಾಳಿದ ಪುಣ್ಯ ಪುರುಷರು.

**ಇವರ ಕೃತಿಗಳು ಮಾನವ ಲೋಕಕ್ಕೆ ನೀಡಿದ ಮಹಾ ಪ್ರಸಾದವೇ ಸರಿ:**

ನಿಜಗುಣರ ಕೃತಿಗಳ ಹೆಸರುಗಳನ್ನು ನೋಡಿದರೆ

ಒಂದು ಕೃತಿಯು ಇನ್ನೊಂದಕ್ಕೆ ಪೂರಕವೆಂಬಂತೆ ತೋರುತ್ತವೆ. ಮುಮುಕ್ಷುವಿಗೆ ಮೊದಲು "ಪಾರಮಾರ್ಥದ ಪ್ರಕಾರ" ತಿಳಿಯಬೇಕು; ಅದಕ್ಕೆ "ವಿವೇಕ ಚಿಂತಾಮಣಿ" ಬೇಕು; ಅದನ್ನು ಪಡೆದ ನಂತರ "ಅನುಭವ ಸಾರ" ಬೇಕು; ಅನುಭವ ಸಾರವನ್ನು ಅರಗಿಸಿಕೊಂಡು ಜ್ಞಾನಿಯು ಸದಾ "ಪಾರಮಾರ್ಥದ ಗೀತೆ" ಯನ್ನು ಹಾಡುತ್ತ "ಕೈವಲ್ಯ ಪದ್ಧತಿ" ಯನ್ನು ಅರುಹಬೇಕು; ಎಂಬ ಭಾವವು, ಮೂಡುವಂತಿದೆ ಈ ಕೃತಿಗಳ ಕ್ರಮ. ಆದುದರಿಂದ "ಕೈವಲ್ಯ ಪದ್ಧತಿ" ಯು ನಿಜಗುಣರ ಕೊನೆಯ ಕೃತಿಯೂ ಬೋಧಾತ್ಮಕ ಗ್ರಂಥವೂ ಆಗಿದೆಯೆಂದು ವಿಮರ್ಶಕರು ಅಭಿಪ್ರಾಯಪಟ್ಟಿದ್ದಾರೆ. ಕೈವಲ್ಯ ಪದ್ಧತಿಯು ಅವರ ಸ್ವತಂತ್ರ ಪ್ರತಿಭೆಯ ದ್ಯೋತಕವಾಗಿದೆ. ಈ ಕೃತಿಯಲ್ಲಿ ಸಾಹಿತ್ಯದ ಸೌಂದರ್ಯ, ಶಾಸ್ತ್ರದ ಗಾಂಭೀರ್ಯ, ಗಾನದ ಮಾಧುರ್ಯ ಇವುಗಳ ಸುಂದರ ಸಮನ್ವಯವನ್ನು ಕಾಣಬಹುದಾಗಿದೆ. ಕನ್ನಡಿಗರ ಹೆಚ್ಚಳವನ್ನು ನಿಚ್ಚಳವಾಗಿ ಈ ಕೃತಿಯಲ್ಲಿ ನಿಜಗುಣರು ತೋರಿಸಿದ್ದಾರೆ. ಉದಾತ್ತವಾದ ತತ್ತ್ವಗಳನ್ನು ಸರಳವಾದ ಮತ್ತು ಸುಂದರವಾದ ಶೈಲಿಯಲ್ಲಿ ತಮ್ಮ ಅಂತರಂಗದ ಅನುಭವರೂಪವಾದ ಗೀತೆಗಳನ್ನು ಇಲ್ಲಿ ಅನುವರಿತು ಹಾಡಿದ್ದಾರೆ. ಭಾವಗಳಿಗೆ ಅನುಗುಣವಾಗಿ ಬಗೆ ಬಗೆಯ ರಾಗಗಳು ಇಲ್ಲಿ ಮೂಡಿ ಬಂದಿವೆ. ಜನ ಜೀವನದ ಮೇಲೆ ಅಪಾರವಾದ ಪ್ರಭಾವ ಬೀರಿವೆ. 'ಶ್ರೀ ಗುರು ವಚನೋಪದೇಶವನಾಲಿಸಿದಾಗಳಹುದು ನರರಿಗೆ ಮುಕುತಿ' ಎಂಬ ಪದ್ಯದ ಐದು ನುಡಿಗಳು ಪಂಚರತ್ನಗಳಂತಿವೆ. ಇಲ್ಲಿ ಸಾಧಕನು ಕೈಗೊಳ್ಳಬೇಕಾದ ಮೂಲ ಭೂತವಾದ ಜೀವನದರ್ಶನ ಸಾರ ಸಂಗ್ರಹವಾಗಿ ನಿರೂಪಿತವಾಗಿದೆ. ನಿಜಗುಣರು ಬೋಧಿಸುವ ನೈತಿಕ ಜೀವನ ಶುಷ್ಕವಾದ ಉಪದೇಶವಾಗದೆ ನೇರವಾಗಿ ಹೃದಯವನ್ನು ಮುಟ್ಟಬಲ್ಲ ಕಾವ್ಯವಾಣಿ; ದಿವ್ಯವಾಣಿ. ಸಾದೃಶ್ಯಗಳು, ಲೋಕೋಕ್ತಿಗಳು ಮನ ಮುಟ್ಟುವಂತಿವೆ. ಜಾಣನು 'ಲೌಕಿಕ ಪಾರಮಾರ್ಥವೆರಡನ್ನು ಮಾಣದೆ ಕೂಡಿ ನಡೆಸುತಿಹನಿಂತು' ಎನ್ನುವಲ್ಲಿ ಸಮನ್ವಯ ರೂಪಿಸುವ ಆದರ್ಶವಿದೆ. 'ಶ್ರೀಗುರು ವಚನದಿಂದಧಿಕ ಸುಧೆಯುಂಟೆ' 'ರಾಗದಿಂ ಬೇರಿನ್ನು ಭವದ ಬೀಜವುಂಟೆ 'ನರಜನ್ಮದಿಂದಿಹದೊಳು ಮಿಗಿಲುಂಟೆ' 'ಕರಣ ವಿಜಯದಿಂದೆ ಕಲಿತನವುಂಟೆ' ಮೊದಲಾದ ನುಡಿಕಿಡಿಗಳು ಸಫಲ ಜೀವನಕ್ಕೆ ಕನ್ನಡಿ ಹಿಡಿದಂತಿವೆ. 'ಜ್ಯೋತಿ ಬೆಳಗುತಿದೆ, ವಿಮಲ ಪರಂಜ್ಯೋತಿ ಬೆಳಗುತಿದೆ, ಮಾತು ಮನಂಗಳಿಂದತ್ತತ್ತ ಮೀರಿದ ಸಾತಿಶಯದ ನಿರುಪಾಧಿಕ ನಿರ್ಮಲ' ಪದವಂತೂ ಕೈವಲ್ಯ ಪದ್ಧತಿಯ ಮಹಾ ಮಂದಿರದ ಹೊಂಗಳಸವಾಗಿದೆ. ಏಕನಾದದ ಹಿನ್ನೆಲೆಯಲ್ಲಿ ಇವುಗಳನ್ನು ಹಾಡುತ್ತಿದ್ದರೆ ಅರ್ಥ ಗಾಂಭೀರ್ಯದಿಂದ ಇಡೀ ವಾತಾವರಣವನ್ನೆಲ್ಲ ಆಧ್ಯಾತ್ಮವನ್ನಾಗಿಸುವ ದಿವ್ಯಶಕ್ತಿ ಈ ಹಾಡುಗಳಿಗಿದೆ; ಮಧುರ ಶಬ್ದ ಸಮುದಾಯದಿಂದಲೂ, ಮನೋಹರವಾದ ಶಬ್ದಾಲಂಕಾರ ಅರ್ಥಾಲಂಕಾರಗಳ ಮಂಜುಳ ರಸ ಭಾವಗಳಿಂದ ಸಾಹಿತ್ಯದ ರಸದೌತಣ ಕನ್ನಡಿಗರಿಗೆ ನೀಡಿದ ಈ ಮಹಾನುಭಾವನು ಮಹಾದೇವನು ಮಾನವ ಲೋಕಕ್ಕೆ ನೀಡಿದ ಮಹಾಪ್ರಸಾದ ಸ್ವರೂಪವೇಸರಿ. ಗಹನ ವಿಷಯವನ್ನು ಸುಲಭವಾಗಿ ಹೇಳುವ ಇವರ ಅಪ್ರತಿಮ ಪ್ರತಿಭೆಗೆ ಮಾರುಹೋಗದ ಕನ್ನಡಿಗನೇ ಇಲ್ಲವೆಂದರೆ ಅತಿಶಯೋಕ್ತಿಯಾಗಲಾರದು. ಇಂದಿಗೂ ಹಳ್ಳಿಗಳ ಭಜನಾ ಮೇಳಗಳು ಅತ್ಯಂತ ಪ್ರೇಮದಿಂದ ನಿಜಗುಣರ ಪದಗಳನ್ನು ರಸವತ್ತಾಗಿ ಹಾಡುವುದನ್ನು ನೋಡಬಹುದು.

**ಎಲ್ಲವರ್ಗದ ಜನರಿಗೂ ವಿವೇಕದಾಯಿನಿ ಇವರ ವಿವೇಕ ಚಿಂತಾಮಣಿ.**

ಸುಮಾರು 9600 ಗ್ರಂಥಗಳನ್ನು ಪರಿಶೀಲಿಸಿ ವಿವೇಕ ಚಿಂತಾಮಣಿ ಕನ್ನಡದ ಪ್ರಪ್ರಥಮ ವಿಶ್ವಕೋಶ; ಭಕ್ತ, ಜ್ಞಾನಿ, ಕರ್ಮಿ, ಕವಿ, ಪಂಡಿತ, ಜ್ಯೋತಿಷಿ,ವೈದ್ಯ, ಶಿಲ್ಪಿ, ಗಾಯಕ, ವೀರ, ವ್ಯಾಪಾರಿ, ಕೃಷಿಕ ಜೀವನ್ಮುಕ್ತ ಇವರಲ್ಲಿ ಪ್ರತಿಯೊಬ್ಬನೂ ತನ್ನ ತನ್ನ ಮೆಚ್ಚಿದ ವಿಷಯ ವಿವೇಕವನ್ನು ಈ ಗ್ರಂಥ ಚಿಂತಾಮಣಿಯನ್ನು ಆಶ್ರಯಿಸಿ ಪಡೆಯಬಹುದಾಗಿದೆ. ಒಂದು ವಿಶ್ವವಿದ್ಯಾಲಯವು ಮಾಡಬಹುದಾದ ಕಾರ್ಯವನ್ನು ಏಕಾಂಗವೀರರಾಗಿ ಒಬ್ಬರೇ ಸಾಧಿಸಿ ತೋರಿಸಿದ

ನಿಜಗುಣರು ಪ್ರಗಲ್ಭ ಪಂಡಿತರೆಂಬುದಕ್ಕೆ ಬೇರೆ ನಿದರ್ಶನ ಬೇಕಿಲ್ಲ. ಈ ಗ್ರಂಥವು ತಮಿಳು ಮರಾಠಿ ಸಂಸ್ಕೃತಗಳಲ್ಲಿ ಅನುವಾದಿತಗೊಂಡಿದೆ. ಅವರ ಗದ್ಯ ರಚನಾ ಕೌಶಲ್ಯಕ್ಕೆ ಒರೆಗಲ್ಲಾಗಿದೆ. ಅವರ ಕೃತಿ ರತ್ನಮಾಲಿಕೆಯಲ್ಲಿ ಚೂಡಾರತ್ನದಂತೆ ಶೋಭಿಸುತ್ತಿದೆ. 'But his best known work is Viveka-Chintamani, a very useful encyclopaedia of Sanskrit terms and Veerasaiva lore' ಎಂದ ಮಾನ್ಯ ಇ. ಪಿ. ರೈಸರ ನುಡಿಮುತ್ತುಗಳನ್ನು ಇಲ್ಲಿ ಸ್ಮರಣೆಗೆ ತಂದುಕೊಳ್ಳಬಹುದು. ಶ್ರೀ ನಿಜಗುಣರ ಉಭಯ ಭಾಷಾ ಪಾಂಡಿತ್ಯಕ್ಕೆ ಈ ಕೃತಿರತ್ನವೇ ಸಾಕ್ಷಿ. ಈ ಕೃತಿಯಲ್ಲಿ ವೀರಶೈವರ ಲಕ್ಷಣಗಳನ್ನು ಮನಂಬುಗುವಂತೆ ವರ್ಣಿಸಿದ್ದಾರೆ. 'ಪಾರಮಾರ್ಥ ಪ್ರಕಾಶಿಕೆ' ಶ್ರೀ ಚೆನ್ನಸದಾಶಿವಯೋಗಿಯು ಸಂಸ್ಕೃತದಲ್ಲಿ ರಚಿಸಿದ 'ಶಿವಯೋಗ ಪ್ರದೀಪಿಕೆ' ಎಂಬ ಯೋಗಶಾಸ್ತ್ರದ ಕನ್ನಡ ಭಾಷಾಂತರ; ಆದರೂ ಶ್ರೀ ನಿಜಗುಣರ ಅಗಾಧ ವಿದ್ವತ್ತು ಮತ್ತು ಅನುಭಾವಗಳ ಸಮ್ಮಿಳನದಿಂದ ಬೇರೊಂದು ಸ್ವತಂತ್ರ ಕೃತಿಯಾಗಿ ಪರಿಣಮಿಸಿದೆ.

ಆಧ್ಯಾತ್ಮ ಜಿಜ್ಞಾಸೆಯ ಅಮರ ಕಾವ್ಯ.

ವಿವೇಕಿಗಳು ಅಲ್ಪ ಸುಖಕ್ಕಾಗಿ ಎಂದೂ ಪ್ರಯತ್ನಿಸರು. ಅವರಿಗೆ ಬೇಕಾದ್ದು ಪರಮ ಸುಖ. ಅದು ಪರಮಾನುಭವದಿಂದಲೇ ಸಾಧ್ಯವಾಗಬಲ್ಲದು. ಅಂತೆಯೇ ನಿಜಗುಣರು ನಿಜ ಸುಖಾಭಿಲಾಷೆಗಳಿಗಾಗಿ "ಪರಮಾನುಭವ ಬೋಧೆ" ಎಂಬ ಅರ್ಥಪೂರ್ಣವಾದ ಗ್ರಂಥವನ್ನು ರಚಿಸಿದ್ದಾರೆ. ಇದು ಮಹರ್ಷಿ ಯಾಜ್ಞವಲ್ಕ್ಯರು ತಮ್ಮ ಪತ್ನಿ ಮೈತ್ರೇಯಿಗೆ ನೀಡಿದ ಅದ್ವೈತ ತತ್ತ್ವೋಪದೇಶದ ಸಂಸ್ಕೃತ ಗ್ರಂಥದ ಭಾವ ಪ್ರಕಾಶಿಕೆಯಾಗಿದೆ; ಸಾಂಗತ್ಯ ರೂಪದಲ್ಲಿ ಪ್ರವಹಿಸಿರುವ ಆಧ್ಯಾತ್ಮ ಜಿಜ್ಞಾಸೆಯ ಅಮರ ಕಾವ್ಯ "ಅರವತ್ತುಮೂರು ಪುರಾತನರತ್ರಿವಿಧಿ" ಅವರ ಅತ್ಯಂತ ಚಿಕ್ಕಕೃತಿ. ಒಂದೊಂದೇ ಪದ್ಯದಿಂದ ಒಬ್ಬೊಬ್ಬರ ಜೀವನವನ್ನು ಚಿತ್ರಿಸಿ ಸುಂದರ ಭಕ್ತಿ ಕಾವ್ಯವನ್ನು ಸಮರ್ಪಿಸಿದ್ದಾರೆ. 'ಅನುಭವಸಾರ' ವು ದಶೋಪನಿಷತ್ತುಗಳ ಸಾರ. ತ್ರಿವಿಧಿಯಲ್ಲಿ ರಚಿತವಾದ ಈ ಕೃತಿಯಲ್ಲಿ 8 ಸಂಧಿ 46 ಸೂತ್ರ, 535 ತ್ರಿವಿಧಿಗಳಿವೆ. ವೇದಾಂತವನ್ನು, ಅರಿಯಲು ಬಹಳ ಉಪಕಾರಿ. ಪಾರಮಾರ್ಥ ಗೀತೆಯು ಯೋಗವಾಸಿಷ್ಠ, ವೇದ, ಉಪನಿಷತ್ತು, ಧರ್ಮಸೂತ್ರಗಳು ಮತ್ತು ಪುರಾಣಪ್ರದ ಧರ್ಮದರ್ಶನಗಳನ್ನು ಪ್ರತಿಬಿಂಬಿಸುವ ಕನ್ನಡ ಆಧ್ಯಾತ್ಮಿಕ ಕೃತಿ. ಮೋಕ್ಷ ಸಾಧಕರಿಗೆ ಜಿಜ್ಞಾಸುಗಳಿಗೆ, ಮತ್ತು ತತ್ತ್ವಾಭಿಮಾನಿಗಳೆಲ್ಲರಿಗೂ ಪ್ರಿಯಂಕರವಾದ ಗೀತಕಾವ್ಯ. ನೂರಾರು ಗ್ರಂಥಗಳ ಸಾರ ಸರ್ವಸ್ವವನ್ನು ತಿಳಿಗನ್ನಡದಲ್ಲಿ ಅಡಗಿಸಿ ಕನ್ನಡಿಗರಿಗೆ ಆತ್ಮ ತತ್ತ್ವಾಮೃತದ ಧಾರೆಯೆರೆದಿದ್ದಾರೆ. ಶ್ರೀ ನಿಜಗುಣರು, ವೈವಿಧ್ಯಮಯವಾದ ವೈಶಿಷ್ಟ್ಯಪೂರ್ಣವಾದ ವಿಷಯಗಳ ಮೇಲೆ ಸಾಹಿತ್ಯ ಸೃಷ್ಟಿಸಿ ಕನ್ನಡ ಸಾಹಿತ್ಯ ಸರಸ್ವತಿಯ ಶ್ರೀಮಂತಿಕೆಯನ್ನು, ಧೀಮಂತಿಕೆಯನ್ನು ಹೆಚ್ಚಿಸಿ ಕನ್ನಡಿಗರಿಗೆ ಮಹದುಪಕಾರ ಮಾಡಿ ಅಮರರಾಗಿದ್ದಾರೆ. —

## ಆಸೆ

"ಆಸೆಯಿಂದ ಈ ದೇಹ ಹುಟ್ಟುವುದು. ಆಸೆ ಇಲ್ಲದೆ ಇದ್ದರೆ ದೇಹ ತಾನೆ ಬಿದ್ದುಹೋಗುವುದು. ಆಸೆ ಸಂಪೂರ್ಣವಾಗಿ ನಾಶವಾದಾಗ ಮುಕ್ತಿ ಲಭಿಸುವುದು"

—ಶ್ರೀ ಮಾತೆ ಶಾರದಾದೇವಿ.

# ಮಣ್ಣಿನ ಮಕ್ಕಳ ಮೋಜಿನ ಸರಣಿ

## "ಸದ್ಗುರುವಿಗೆ ಅಡಿಗೆಯ ಮಾಡಿದೆನೇ"

ಸಂಗ್ರಹಕಾರರು : ಕೆ. ವಿರೂಪಾಕ್ಷಗೌಡ    ಹಾಡಿದವರು : ಹರಿಜನ ಮಾಯಕ್ಕ (35 ವರ್ಷ)

ಹದನೋಡಿ ಜ್ಯಾಳಿಯ ಹಾಕಿ। ಅಡಿಸೇರು ಬೆಲ್ಲವ ತೂಗಿ
ಚಿತ್ತದಿಂದ ಹುಟ್ಟನಿಟ್ಟು। ಸಂತೋಷಪಟ್ಟವ ಬರೆದು
ಕಡುಬು ಮಾಡಿದೆನು। ಸದ್ಗುರುವಿಗೆ ಅಡಿಗೆಯ ಮಾಡಿದೆನೇ॥

ಶಿವನೆಂಬೋ ಹಿಟ್ಟು ನಾದಿ। ಶಿವಮಂತ್ರವ ಹುಳ್ಳಿಯ ಸರಿದು
ನಾನೆಂಬುವ ಹಾಳಿಯ ಹಾಕಿ। ತಾನೆಂಬ ಹೂರಣ ತುಂಬಿ
ಕಡುಬು ಮಾಡಿದೆನು। ಸದ್ಗುರುವಿಗೆ ಅಡಿಗೆಯ ಮಾಡಿದೆನೆ॥

ಭವವೆಂಬ ಬಾಳಿಯನಿಟ್ಟು। ತಪವೆಂಬ ಎಣ್ಣೆಯ ಸುರವಿ
ಭಕ್ತಿಲಿಂದ ಕಡುಬುವ ಬಿಟ್ಟು। ಇಕ್ತಿಲಿಂದ ಕದುರುವ ಜುಬ್ಬಿ
ಕಡುಬವ ಮಾಡಿದೆನು। ಸದ್ಗುರುವಿಗೆ ಅಡಿಗೆಯಮಾಡಿದೆನೆ॥

ಜಪವೆಂಬ ಬಾನವ ಬಸಿದು। ತಪವೆಂದುತಾಬಂಡೆ ತೊಳೆದು
ಶ್ರೇಷ್ಠದ ತುಪ್ಪವ ಕಾಸಿ। ಸಾರು ನೀಡಿ ಸಾಷ್ಟಾಂಗಹಾಕಿ
ಕಡುಬುವ ಮಾಡಿದೆನು। ಸದ್ಗುರುವಿಗೆ ಅಡಿಗೆಯ ಮಾಡಿದೆನೆ॥

ಉಳಿವಿಯ ಒಳಗಿರುವ ಜಂಬಸಣ್ಣನಿನಗೆ। ಬ್ಯಾಸರಿಲ್ಲದೆ ನಡೆದು
ದ್ಯಾಸ ಉಳಿಯಲು ನಿಮಗೆ। ಕಡುಬವ ಮಾಡಿದೆನು
ಸದ್ಗುರುವಿಗೆ ಅಡುಗಿಯ ಮಾಡಿದೆನೆ॥

ಜಾನಪದ ಜೇನು-೮

# "ಹೆತ್ತೆಣ್ಣ ಜೂಜು ಮಗನೀಗೆ"

—ಗೊ. ರು. ಚನ್ನಬಸಪ್ಪ

ಗ್ರಾಮೀಣ ಕುಟುಂಬಗಳ ಪರಸ್ಪರ ಸಂಬಂಧ ಬಿಟ್ಟುಬಿಡಲಾಗದ ಗಂಟು, ಅವ್ಯಾಹತವಾಗಿ ಹರಿದು ಬಂದ ನಂಟು. ಹೆಣ್ಣು ಕೊಟ್ಟು ಹೆಣ್ಣು ತಂದು ಆ ಸಂಬಂಧವನ್ನು ಚಿರಂಜೀವಿಯಾಗಿ ಮಾಡಬೇಕೆಂಬ ಆಸೆ ಅವರದು. "ಕಳ್ಳು [ಕರುಳು]-ಬಳ್ಳಿ ಬಿಟ್ಹೋಗ್ಬಾರ್ದು" ಎನ್ನುವ ಕಟ್ಟುನಿಟ್ಟಿನ ನಡವಳಿಕೆ. ಈ ನಡವಳಿಕೆಗೆ ಅಡ್ಡಿಯಾದಾಗ ತಿಳಿದ ಹಿರಿಯರ ಮಧ್ಯಸ್ಥಿಕೆ ಕೋರುತ್ತಾರೆ.

ಅಣ್ಣನ ಮದುವೆಯಾಗುವಾಗಲೇ ತಂಗಿ ತನ್ನ ಕರುಳಿನ ಗಂಡು ದೀಪಕ್ಕೆ ಅಣ್ಣನ ಕರುಳಿನ ಹೆಣ್ಣು ದೀಪ ತಂದು ಜೋಡಿಸುವ ಷರತ್ತು ಹಾಕುತ್ತಾಳೆ. ಮುಹೂರ್ತ ಮುಗಿದಿದೆ. ನೂತನ ದಂಪತಿಗಳು ಈಗ ಮನೆ ತುಂಬಬೇಕು. ಬಾಗಿಲಿನಲ್ಲಿ ಪೂಜೆಯ ಶಾಸ್ತ್ರ ಮಾಡಿ ದಂಪತಿಗಳಿಗೆ ಆರತಿ ಬೆಳಗಿ ಒಳಗೆ ಕರೆದುಕೊಳ್ಳಬೇಕು. ಆರತಿ ಬೆಳಗುವ ಕೆಲಸ ಮದು ಮಗನ ಒಡಹುಟ್ಟಿದ ತಂಗಿಗೆ ಕಟ್ಟಿದ ಪಟ್ಟ. ಅಣ್ಣನ ಹಿರಿಮೆ ಕುರಿತು, ಅತ್ತಿಗೆಯಲ್ಲಿ ಆದರ್ಶ ತುಂಬಿ ಹಾಡಿ ಹೊಗಳಿ ಆರತಿ ಬೆಳಗುತ್ತಾಳೆ. ಇನ್ನು ನೂತನ ದಂಪತಿಗಳು ಹೊಸ್ತಿಲು ದಾಟಿ ಒಳಬರಬೇಕೆನ್ನುವಷ್ಟರಲ್ಲಿ–

ಗಿಂಡಿ ತೋರಣಕಾಗಿ। ಬಂದ ಗಂಡಿನ ತಂಗಿ
ತೆಂಗು ಬಾಳೇಯ ಅಡಕೇಯ। ತೋರಣಕಾಗಿ
ಬಂದು ಬಾಗೀಲ ತಡೆದಾಳ ॥

ಬಹಳ ಹೊತ್ತು ಹಟ್ಟಿಯಲ್ಲಿ ನಿಂತ ದಂಪತಿಗಳಿಗೆ ಕಾಲು ನೋಯುತ್ತವೆ. ನೆತ್ತಿಯ ದಂಡೆ ಸರಿಯುತ್ತದೆ. ಬಿಸಿಲಿನ ಬೇಗೆ ಬೇರೆ. ಹಸಿವೂ ಆಗಿರಬಹುದು. ತಡೆದ ಬಾಗಿಲ ಬಿಡಲು ತಂಗಿಗೆ ಹೇಳುತ್ತಾನೆ ಅಣ್ಣ. ಆದರೆ ಆಕೆ ಬಾಗಿಲು ಬಿಡುವುದಿಲ್ಲ. ಬಾಗಿಲು ಬಿಟ್ಟರೆ "ಒಂಟಿ ಕೊಡುತ್ತೇನೆ, ಒಂಟಿ ಮುರಿಗಳನ್ನು ಕೊಡುತ್ತೇನೆ, ಕೊರಳಿಗೆ ಕಂಠೀಸರ ಕೊಡುತ್ತೇನೆ" ಎಂದು ಏನೆಲ್ಲ ಭಾಷೆ ಕೊಡಲು ಆತ ಪ್ರಯತ್ನಿಸಿದರೂ ಆ ದಿಟ್ಟ ತಂಗಿ ಹೇಳುತ್ತಾಳೆ–

ಒಂಟಿಗಳು ನಮಗುಂಟು, ಒಂಟಿ ಮುರಿಗಳು ಉಂಟು
ಕಂಠೀಸರ ಉಂಟು ಕೊರಳೀಗೆ। ಅಣ್ಣಯ್ಯ
ತಡೆದ ಬಾಗೀಲ ಬಿಡಲೊಲ್ಲೆ ॥

ಆಕೆಯ ಮನೆಯಲ್ಲಿ ಒಂಟಿಗಳೂ ಇಲ್ಲ, ಒಂಟಿ ಮುರಿಗಳೂ ಇಲ್ಲ. ಕೊರಳಲ್ಲಿರುವ ಕರಿಮಣಿ ಸರವೇ ಆಕೆಗೆ ಕಂಠೀಸರ. ಆದರೂ ಎಂತಹ ಸ್ವಾಭಿಮಾನದ ಮಾತು! ಎಷ್ಟು ಹೇಳಿದರೂ ಕೇಳದ ತಂಗಿಗೆ "ನೀನಾದರೂ ಹೇಳಿನೋಡು" ಎಂದು ಪಕ್ಕದಲ್ಲಿದ್ದ ತನ್ನ ಹೆಂಡತಿಗೆ ಹೇಳುತ್ತಾನೆ.

ಕಲ್ಯಾಣ್ಲಿ ಕಲ್ಲೊಡ್ಡಿ, ಮಲ್ಲಿಗೆ ಕುಯ್ಯೊ ಜಾಣೆ
ತಂಗ್ಯವ್ವ ಬಾಗೀಲ ಬಿಡಳಲ್ಲೆ। ಅವಳೊಂದು
ಮಾತಿಗಿ ಬಾಗೀಲ ತಡೆದಾಳೆ ॥

ತಂಗಿಯ ಅಂತರಂಗ ಅಣ್ಣನಿಗೆ ಅರ್ಥವಾಗಿರಬೇಕು. ಆ ಅರ್ಥ ತನ್ನ ಕೈಹಿಡಿದವಳಿಗೂ ಆಗಬೇಕಾಗಿದೆ. ಹೆಂಡತಿಗೆ ಹೇಳುವ ಬೆಡಗಾದರೂ ಎಷ್ಟು ಸೊಗಸು! ಬಹುಶಃ ಅವನ ಹೆಂಡತಿ ಎತ್ತರದಲ್ಲಿ ಸ್ವಲ್ಪ

ಕಡಿಮೆ ಇರಬೇಕು. ಅದಕ್ಕೆ ಅವಳು ಕಲ್ಲಿನ ಮೇಲೆ ಕಲ್ಲು ಹೂಡಿ, ಮಲ್ಲಿಗೆ ಹೂ ಕುಯ್ಯ ಬೇಕು. ಸಾಮಾನ್ಯ ಮಾತಿನಲ್ಲೂ ಸರಸದ ಸೊಬಗು ತುಂಬು ವುದು ನಮ್ಮ ಗ್ರಾಮೀಣರಿಗೆ ಸಹಜವಾಗಿ ಮೈಗೂಡಿರುವ ಸಂಸ್ಕಾರ. ಅತ್ತಿಗೆಯ ನುಡಿಗೆ ನಾದಿನಿ ಸೋತಂತೆ ಕಾಣುತ್ತದೆ. ಆದರೆ ಒಂದು ಷರತ್ತಿನ ಮೇಲೆ–

ಅತ್ತಿಗತ್ತೀಗೆ। ಅಡಕೆ ಜೂಜಾಡ್ಯಾವು।
ಮುತ್ತೀನ ಜೂಜು ಸರಜೂಜು। ಅತ್ತಿಗೆ
ಹೆತ್ತೆಣ್ಣ ಜೂಜು ಮಗನೀಗೆ ॥

ತಾನು ಹುಟ್ಟಿ ಬೆಳೆದ ತೌರನ್ನು ಬಿಟ್ಟು ಹೋದರೂ ಅತ್ತಿಗೆಯ ಹೊಟ್ಟೆಯಲ್ಲಿ ಬೆಳೆಯುವ ಮತ್ತೊಂದು ಹೂವನ್ನು ತಂದು ತನ್ನ ಮನೆಯನ್ನು ತುಂಬಿಸಿಕೊಳ್ಳ ಬೇಕೆಂಬ ಹಂಬಲ ಈ ಹೆಂಗರುಳಿಗೆ. ಆಗಲೆಂದು ಹೇಳು ತ್ತಾಳೆ ಅತ್ತಿಗೆ.

ನೀನು ಗಂಡ್ಹಡೆದಾಗ। ನಾನು ಹೆಣ್ಣಡೆದಾಗ
ಗಾಜನೂರ ಗದ್ದೆ ಬೆಳೆದಾಗ। ನಾದೀನಿ
ಮಗನೀಗೆ ಧಾರೆ ಎರದೇನು ॥

ಜಾಣ್ಮೆಯ ಉತ್ತರ. 'ಬೀಸುವ ದೊಣ್ಣೆ ತಪ್ಪಿದರೆ ಆಯಸ್ಸು ಸಾಸಿರ' ವೆಂಬುದು ಅತ್ತಿಗೆಗೆ ಚೆನ್ನಾಗಿ ಗೊತ್ತು. ಒದಗಿ ಬಂದ ಪ್ರಸಂಗ ತಪ್ಪಿಸಿಕೊಳ್ಳಲು ಆಡಿದ ಆ ಮಾತಿನಲ್ಲಿ ಅನುಭವಿಕ ದೃಷ್ಟಿಯಿದೆ. ಶಿವನ ದಯದಿಂದ ನಾದಿನಿಗೆ ಗಂಡಾಗಬೇಕು, ಅತ್ತಿಗೆಗೆ ಹೆಣ್ಣಾಗಬೇಕು. ಕೇವಲ ಅವರು ಗಂಡು–ಹೆಣ್ಣು ಹಡೆದರಷ್ಟೇ ಸಾಲದು. ಗಾಜನೂರು ಗದ್ದೆ ಸಮೃದ್ಧವಾಗಿ ಬೆಳೆಯಬೇಕು. ನಿಜ. ಮದುವೆಯೆಂದರೆ ನೆಂಟರಿಷ್ಟರಿಗೆ ಸಂತೃಪ್ತಿಯ ಊಟೋಪಚಾರ ನಡೆಯಬೇಕು. ಗದ್ದೆ ಬೆಳೆದರೆತಾನೆ ಇದೆಲ್ಲ ಸಾಧ್ಯ! "ಅಕ್ಕ ಇಲ್ದಿದ್ರೂ ನಡೆದೀತು ಅಕ್ಕಿ ಇಲ್ದಿದ್ರೆ ನಡೆದೀತಾ?" ಎಂದು ಗಾದೆಯೇ ಇದೆ. ಅದಕ್ಕೆ "ಗಾಜನೂರು ಗದ್ದೆ ಬೆಳೆದಾಗ, ಮಗನಿಗೆ ಧಾರೆ ಎರದೇನು" ಎನ್ನುತ್ತಾಳೆ ಅತ್ತಿಗೆ.

ತಂಗಿಯೇನು ಕಡಮೆಯಲ್ಲ. ಅತ್ತಿಗೆಯ ಮಾತನ್ನು ಸುಮ್ಮನೆ ನಂಬುವ ಮುಗ್ಧೆಯಲ್ಲ; ತುಂಬ ವ್ಯವಹಾರ ಕುಶಲಿ!

ಊರ ಮುಂದಿರುವಂತ, ಹೊನ್ನಳ್ಳಿಮರವೇ
ಅಣ್ಣನ ಮನೆಗೆ ಹೆಣ್ಣೀಗೆ। ಬರುತೀನಿ
ಹೊಣೆಯಾಗು ನನಗೆ ನೆರಳಾಗು ॥

ತಮ್ಮಿಬ್ಬರ ಮಧ್ಯೆ ನಡೆದ ಮಾತು-ಕತೆಗೆ ಊರ ಮುಂದಿರುವ ಹೊನ್ನಳ್ಳಿ ಮರದ ಸಾಕ್ಷಿ ಕೇಳುತ್ತಾಳೆ. ಅತ್ತಿಗೆಯ ಮಾತಿಗೆ ಅರಳಿ ಮರದ ಜಾಮೀನು! (Surity).

ನಮ್ಮ ಜನ ನಿಸರ್ಗದ ಬಗ್ಗೆ ಎಂತಹ ನಿಶ್ಚಲ ವಿಶ್ವಾಸವಿಟ್ಟಿದ್ದಾರೆಂಬುದನ್ನು ಈ ನುಡಿಯಲ್ಲಿ ಕಾಣ ಬಹುದು. ಅಲ್ಲಿ ಸುತ್ತಮುತ್ತ ಹತ್ತೆಂಟು ಜನ ಹತ್ತಿರದ ನೆಂಟರಿಷ್ಟರು ಮುತ್ತಿ ನಿಂತಿದ್ದರೂ ಅವರಾರ ಬಗೆಗೂ ಆಕೆಗೆ ನಂಬಿಗೆಯಿಲ್ಲ. ಅವರು ಸಮಯ ದಲ್ಲಿ ಮಾತಿಗೆ ತಪ್ಪಬಹುದು. 'ಎಲುವಿಲ್ಲದ ನಾಲಗೆ ಎಲ್ಲಿಗಾದರೂ ಹೊರಳಬಹುದು.' 'ಮೂರು ಕೊಟ್ಟಾಗ ಸೊಸೆಯಕಡೆ, ಆರು ಕೊಟ್ಟಾಗ ಅತ್ತೆಯಕಡೆ' ಹೇಳ ಬಹುದು. ಈ ಕಾರಣದಿಂದ ಲೋಕದ ಜನರ ಬಗ್ಗೆ ಅವಳು ವಿಶ್ವಾಸ ಕಳೆದುಕೊಂಡಿದ್ದಾಳೆ. ಅದಕ್ಕೆ ನಿಸರ್ಗದ ಕರುಣೆಯಾದ ಅರಳಿ ಮರದ ಸಾಕ್ಷಿ ಕೇಳು ತ್ತಾಳೆ. 'ಹೊಣೆಯಾಗು ನನಗೆ ನೆರಳಾಗು' ಎನ್ನುವ ಆಕೆಯ ಮಾತು ನಿಜಕ್ಕೂ ನಮ್ಮ ಹೃದಯವನ್ನು ಮಿಡಿಯುತ್ತದೆ. ಒಂದುವೇಳೆ ಅಣ್ಣ-ಅತ್ತಿಗೆ ಮಾತಿಗೆ ತಪ್ಪಿದರೂ ನೀನು ನನಗೆ ರಕ್ಷಣೆ ನೀಡಬೇಕು. ಎಂದು ಹೇಳುವ ಆ ಹೆಣ್ಣಿನ ಮಾತು ಅರಳಿ ಮರಕ್ಕೂ ಹಿಡಿಸಿರಬೇಕು. 'ಆಗಲಿ' ಎನ್ನುವಂತೆ ಬೀಸುವ ಗಾಳಿಯಲ್ಲಿ ತಲೆಯಾಡಿಸಿರ ಬೇಕು. ಅಣ್ಣನಿಗಿಂತ ಅತ್ತಿಗೆಯ ಮಾತು ಮುಖ್ಯ. ಅದು ದೊರೆಯಿತೆಂದಮೇಲೆ ತಂಗಿಗೆ ತೃಪ್ತಿ. ಆ ತೃಪ್ತಿ ಯೊಡನೆ ಮತ್ತೊಮ್ಮೆ ಅಣ್ಣ-ಅತ್ತಿಗೆಯರಿಗೆ ಮನಸಾರೆ ಆರತಿ ಬೆಳಗಿ ಹಣೆಗೆ ಅಕ್ಷತೆ ಇಡುತ್ತಾಳೆ. ಆ ಅಕ್ಷತೆ ಅವರಿಬ್ಬರ ಮಧ್ಯೆ ನಡೆದ ಒಪ್ಪಂದಕ್ಕೆ ಒತ್ತಿದ ಮುದ್ರೆಯ ಸಂಕೇತವೆಂದು ಭಾವಿಸುತ್ತಾಳೆ. ಇನ್ನು ನೂತನ ದಂಪತಿಗಳು ಹರ್ಷದಿಂದ ಮನೆದುಂಬುತ್ತಾರೆ.

—

# ಜೀವನದ ಅರ್ಥ

[ಸಾಧಾರ]

—ಸಾ. ವೆಂ. ಆಚಾರ್ಯ

ಜೀವನಕ್ಕೆ ಅರ್ಥ ವುಂಟೆ ? ಇದ್ದರೆ ಅದೇನು? ಈ ಪ್ರಶ್ನೆಗೆ ಉತ್ತರ ಪಡೆಯುವ ಮೊದಲು 'ಜೀವನ' ಮತ್ತು 'ಅರ್ಥ' ಇವೆರಡಕ್ಕೂ ಲಕ್ಷಣವಾಕ್ಯ [definition] ಕೊಡಬೇಕಾಗುತ್ತದೆ. ಮನುಷ್ಯನ ಜೀವನವನ್ನೇ ಕುರಿತು ಹೇಳುವುದಾದರೆ, ಸೃಷ್ಟಿಯ ಒಂದು ಅಂಗವಾದ ಮನುಷ್ಯನನ್ನು ಸೃಷ್ಟಿಯಿಂದ ಪ್ರತ್ಯೇಕಿಸಲು ಬರುವುದಿಲ್ಲವಾದ್ದರಿಂದ ಅವನ ಜೀವನಕ್ಕೆ ಸೃಷ್ಟಿಗಿಂತ ಭಿನ್ನವಾದ, ಪ್ರತ್ಯೇಕವಾದ ಅಸ್ತಿತ್ವವನ್ನು ಹೇಳಲು ಬರುವುದಿಲ್ಲ. ಹಾಗೆಯೇ 'ಅರ್ಥ' ಶಬ್ದಕ್ಕೆ ಪ್ರಯೋಜನವೆಂಬ ಅರ್ಥ ಇಟ್ಟುಕೊಂಡರೆ ಮನುಷ್ಯನ ಜೀವನಕ್ಕೆ ಸೃಷ್ಟಿಗಿಂತ ಪ್ರತ್ಯೇಕವಾದ ಅರ್ಥ ಇಲ್ಲ ಎನ್ನದೆ ಬೇರೆ ದಾರಿ ಕಾಣುವುದಿಲ್ಲ. ಜೀವನಕ್ಕೆ ಮನುಷ್ಯ ತಾನು ರೂಪಿಸಿಕೊಳ್ಳಬಹುದಾದ ಅರ್ಥ ಹೊರತು ಇನ್ನೊಂದು ಅರ್ಥ ಇಲ್ಲ ಎಂಬ ಅಸ್ತಿತ್ವವಾದಿಗಳ ವಾದ, ಮನುಷ್ಯನನ್ನು ಭೂತದಿಂದ ಪ್ರತ್ಯೇಕಿಸುವುದಾದರೆ ಮಾತ್ರ ಆಕರ್ಷಕವೆನಿಸುತ್ತದೆ. ಆದರೆ ಮನುಷ್ಯನನ್ನು ಭೂತದಿಂದ ಪ್ರತ್ಯೇಕಿಸಲಾಗುವುದಿಲ್ಲ. ವ್ಯಕ್ತಿಯ ಭೂತಾದ್-ಭೂತಕ್ಕೆ ಹೋಗುವಾಗ, ನಮ್ಮ ಹುಟ್ಟು ನಮ್ಮ ಹೊರಗಿನ ಯಾವುದೋ ಶಕ್ತಿಯ [ದೇವರೆಂದೇ ಹೇಳಬೇಕಾಗಿಲ್ಲ] ಕೈವಾಡವಾದ್ದರಿಂದ, ನಮ್ಮ ಅರ್ಥಾನ್ವೇಷಣೆಯ ಅದ್ಯಂತ ಮಿತಿಗಳು ಮಾತ್ರವಲ್ಲ, ಅರ್ಥಾನ್ವೇಷಣ ಸಾಮಗ್ರಿಯ ಆಳ-ಎತ್ತರಗಳ ಮಿತಿಯೂ ಗೋಚರಕ್ಕೆ ಬರುತ್ತದೆ. ಮನುಷ್ಯನಾಗಲಿ, ಅವನ ಜೀವನವಾಗಲಿ, ಸೃಷ್ಟಿಗಿಂತ ಹೊರಗಿನ ಅರ್ಥವನ್ನು ಹೊಂದಿಲ್ಲವೆಂದೇ ಕಾಣಿಸುತ್ತದೆ.

ಸೃಷ್ಟಿಗೆ 'ಅರ್ಥ' ಇಲ್ಲ ಎಂದು ತೋರಿದರೂ ಹರಿವೇ-ನಿರಂತರತ್ವವೇ ಅದರ ಅರ್ಥವೆಂದು ನನಗೆ ತೋರುತ್ತದೆ. ಮನುಷ್ಯನನ್ನೊಳಗೊಂಡು ಸಕಲ ಪದಾರ್ಥಗಳು ಸ್ವಭಾವವೆಂಬ ನಿಯಂತ್ರಣ ಶಕ್ತಿಗೊಳಪಟ್ಟು ನಿರಂತರತ್ವವನ್ನು ಸಾಧಿಸುತ್ತಿವೆ. ವ್ಯಕ್ತಿಗಳು ಕ್ಷಣಿಕ; ಜೀವನ, ಸೃಷ್ಟಿ, ನಿರಂತರ. ಯಾವುದು ಇದಕ್ಕೆ ಅನುಕೂಲವಾಗಿ ಸಾಗುತ್ತದೋ ಅದು 'ಸ್ವಾಭಾವಿಕ'; ಯಾವುದು ಪ್ರತಿಕೂಲವೋ ಅದು ಅಸ್ವಾಭಾವಿಕ. ನಮ್ಮ ಅನುಭವದಲ್ಲಿ ಬದುಕು ಸ್ವಾಭಾವಿಕ ಏಕೆಂದರೆ ಬದುಕುವ ಇಚ್ಛೆ ಸಾರ್ವತ್ರಿಕ. ಆದ್ದರಿಂದ ಅದೇ ಜೀವನದ 'ಅರ್ಥ'; ಪ್ರಾಣಿಮಾತ್ರವಲ್ಲ ಪದಾರ್ಥಮಾತ್ರವಾದದ್ದು ಕೂಡ ಸಾವನ್ನು ಮೆಚ್ಚುವುದಿಲ್ಲವಾದ್ದರಿಂದ ಅದು ಅರ್ಥಕ್ಕೆ ವ್ಯತಿರಿಕ್ತ.

ಇದರ ಅರ್ಥ ವ್ಯಕ್ತಿಗಳಿಗೆ ಸಾವು ಇಲ್ಲವೆಂದಲ್ಲ. ಎಲ್ಲ ಜೀವಜಾತಗಳಲ್ಲಿಯೂ ವ್ಯಕ್ತಿ ಕ್ಷಣಿಕವೇ. ಆದರೂ ಅವುಗಳ ಎಲ್ಲಕ್ಕೂ ಪ್ರಬಲವಾದ ಇಚ್ಛೆಗಳು ಆಹಾರ ಮತ್ತು ಮೈಥುನ ಅಸ್ತಿತ್ವವನ್ನು ಮುಂದುವರಿಸುವಂಥವುಗಳಾದ್ದರಿಂದ, ಬದುಕಿನ ಅರ್ಥ ನಿರಂತರತ್ವ ಹೊರತು ವೈಯಕ್ತಿಕ ಅಮರತ್ವವಲ್ಲ. ನಮ್ಮ ಶರೀರದೊಳಗಿನ ಕೋಟ್ಯಾಂತರ ಕೋಶಗಳು ಕ್ಷಣಶಃ ಸಾಯುತ್ತವೆ; ರಕ್ತ ಕಣಗಳು ಶರೀರದ ಒಟ್ಟಂದದ ಉಳಿವಿಗಾಗಿ ತಮ್ಮನ್ನು ಬಲಿಗೊಟ್ಟುಕೊಳ್ಳುತ್ತವೆ. ಹುತ್ತದೊಳಗಿರುವ ಗೆದ್ದಲುಗಳ ವೈಯಕ್ತಿಕ ಅಸ್ತಿತ್ವಕ್ಕೆ ಒಟ್ಟಂದದ ಹೊರತು ಬೇರೆ ಅರ್ಥ ಕಾಣುವುದಿಲ್ಲ; ಏಕೆಂದರೆ ಸಮಷ್ಟಿಯ ರಕ್ಷಣೆಗಾಗಿ ಅವು ನಿಶ್ಶಂಕೆಯಿಂದ ದುಡಿಯುತ್ತವೆ, ಜೀವತ್ಯಾಗ ಮಾಡುತ್ತವೆ.

—



# ನಾಣ್ಯ

❀

ಕಾ
ವ್ಯ
ವಾ
ಹಿ
ನಿ

❀

"ಮರ್ತ್ಯವೆಂಬುದು ಕರ್ತಾರನ ಕಮ್ಮಟವಯ್ಯ
ಇಲ್ಲಿ ಸಲ್ಲುವರು ಅಲ್ಲಿಯೂ ಸಲ್ಲುವರು."
ಹೌದಯ್ಯ ಹೌದು, ದಿಟ ನಿನ್ನ ಮಾತು.
ಕರಣೀಕನಾಗಿದ್ದೆ, ಭಂಡಾರಿಯಾಗಿದ್ದೆ,
ಲೆಕ್ಕಾಚಾರವನೆಲ್ಲ ಬಲ್ಲವ ನೀನು, ಪುರುಷವೃಷಭ.
ಚಿನ್ನದ ನಾಣ್ಯದ ಬೆಲೆಯ ಬಲ್ಲವ ನೀನು,
ನಾಣ್ಯ ಟಂಕಿಸುವ ಕಲೆಯ ಬಲ್ಲವ ನೀನು.
ಸಲ್ಲುವ ದಾರಿಯ ಸಾರಿದೆಯಯ್ಯ.
'ಕಳಬೇಡ ಕೊಲಬೇಡ
ಹುಸಿಯ ನುಡಿಯಲುಬೇಡ
ತನ್ನ ಬಣ್ಣಿಸಬೇಡ •
ಇದಿರ ಹಳಿಯಲುಬೇಡ.'
ನಮ್ಮ ನಾಡಿನ ಅಂದಿನ ಪುಣ್ಯ;
ನಡೆದದ್ದಾಯಿತು ನಾಣ್ಯ,
ನುಡಿದದ್ದಾಯಿತು ನಾಣ್ಯ.
ನುಡಿ ನಡೆ
ನಾಣ್ಯದ
ಆಕಡೆ ಈಕಡೆ
ಒಂದಾದ
ಚಿನ್ನದ ನಾಣ್ಯವ
ತಂದೆ ಚಲಾವಣೆಗೆ–
ನಡೆಯಿತು ನಾಣ್ಯ.
ಎಲ್ಲಿಗೆ ಹೋಯಿತು ಆ ಚಿನ್ನದ ನಾಣ್ಯ ?
ಬೇಹಾರವರಿಯದ ಬೆಪ್ಪರು ಸಂತೇಲಿ
ನಾಣ್ಯವ ಕರಗಿಸಿ ಚಿನ್ನಮಾರಿದರೋ,
ನಾಣ್ಯದ ಬೆಲೆಯ ಗಾಳಿಗೆ ತೂರಿದರೋ
ಮುರಿಸಿ ಮುರಿಸಿ ನಾಣ್ಯ
ಬರಿದಾಯ್ತು ಭಂಡಾರ;
ಚಿನ್ನದ ಬದಲಿಗೆ ಬಂದಿತು ಬೆಳ್ಳಿ,
ಬೆಳ್ಳಿಯ ಬದಲಿಗೆ ಬಂದಿತು ತಾಮ್ರ;
ತಾಮ್ರದ ಜಾಗಕ್ಕೆ ನಿಕ್ಕಲ್ಲು ನೆಲಸಿತು,

ನಿಕ್ಕಲ್ಲಿನೆಡೆಯಲ್ಲಿ ಕಾಗದ ಹಾರಿತು—
ಎಲ್ಲೆಲ್ಲು ನೋಟಿನ ಕಂತೆಯ ಹಾರಾಟ,
ಸ್ವರ್ಗದ ಅಂಗ್ಲ್ಯಲಿ ಕೈಲಾಸ ತೋರಾಟ;
ಸಾಚವ ನಾಚಿಸಿ ಸಲುತಿದೆ ಖೋಟಾ
ನೋಟಿನ ಜೂಟಾಟ.
ಕರ್ತಾರನ ಕಮ್ಮಟ
ಕೈಲಾಸ ಸೇರಿತು;
ನೋಟಿನೋಡಾಟ
ಮರ್ತ್ಯದಲ್ಲುಳಿಯಿತು.
ನಡೆದದ್ದೇ ನಾಣ್ಯ, ನಡೆದಷ್ಟೇ ನಾಣ್ಯ;
ಇದರರ್ಥ ಹಿಡಿದು
ಆದರಂತೆ ನಡೆದು
ಗೆದ್ದವನೆ ಗಣ್ಯ
ನಾಣ್ಯ ಹಿರಣ್ಯ.

—'ರಾ ಘ ವ'

---

# ★ ತ್ರಿಮೂರ್ತಿ ★

ಮೂವರ ಏಕಕವು ನಾನೆ. ಸೃಷ್ಟಿ ಸ್ಥಿತಿ
ಲಯವೆಲ್ಲವೂ ನಾನೆ, ನಾನೇ ನಾನಾಗಿರುವೆ
ಎಲ್ಲದರಲಿ.
ಒಳಹೊರ ಜೀವರಾಶಿಗಳೆಲ್ಲವೂ ನಾನೆ
ಅಳಿವು ಉಳಿವು ಪ್ರಳಯವೆಲ್ಲವೂ ನಾನೆ
ನಾನೇ ತ್ರಿಮೂರ್ತಿ.

ತ್ರಿಶೂಲ ತಿರುಮಣ್ಣಿನ ಮೂರು ನಾಮವೂ ನಾನೆ
ಋಕ್ ಯಜು ಸ್ವಾಮಗಾನಗಳು ಮಂದ್ರ ಮಧ್ಯ ತಾರ
ಸ್ಥಾಯಿಗಳು
ಉದಾತ್ತ ಅನುದಾತ್ತ ನಿಷಾದಿಗಳು ನಾನೆ
ಮೂರ್ಛನೆ, ಷಡ್ಜ ಗಾಂಧಾರ ಮಧ್ಯಮ ಗ್ರಾಮ
ಗಳೆಲ್ಲವೂ ನಾನೆ
ನಾನೇ ತ್ರಿಮೂರ್ತಿ.

ದೇಶೀ ದೇಶೀ ಯದ್ಗಾನಂ ದೇಶಿ ಮಾರ್ಗ ರೀತಿಯೂ
ನಾನೆ
ಶುದ್ಧ ಸ್ವರ ಸಪ್ತಕ ಸಹಸ್ರಶಾಖೆಗಳು
ವಿಶ್ಲೇಷ ವಿಕರ್ಷ ಉತ್ಕರ್ಷಗಳು ನಾನೆ
ರೌರವ ಸಾಮ ಯೌಧಾಜಯ ಸಾಮ ರಥಂತರ
ಸಾಮಗಳೆಲ್ಲವೂ ನಾನೆ,
ನಾನೇ ತ್ರಿಮೂರ್ತಿ.

ವ್ಯಾಖ್ಯಾಗಾನ ವೇದಗಾನ ದಿವ್ಯಗಾನಗಳೂ ನಾನೆ
ಸಾಮ ಲೌಕಿಕ ದೇವಗಾನ ಸ್ವರೂಪ ಮೂರು
ಸಾಮಗಳು
ಧರ್ಮಾಧರ್ಮ ಸಮಾನಾಧಿಕಾರಗಳು ನಾನೆ
ಪ್ರಾತ: ಮಧ್ಯಾಹ್ನ ಸಾಯಂನ ತ್ರಿಸಮಯ ಅವಧಿ
ಗಳೂ ನಾನೆ
ನಾನೇ ತ್ರಿಮೂರ್ತಿ
ತ್ರಿಕಾಲ ಜ್ಞಾನಿ
ಸರ್ವಜ್ಞ.

—ರಘುಸುತ

ಸಿದ್ಧಗಂಗಾ

# ಬಳೆಯ ಬೇಳೆ

ಕಥೆ

ಸ್ವಾತಂತ್ರ್ಯಪೂರ್ವದಲ್ಲಿ ಬ್ರಿಟೀಷರ ದೌರ್ಜನ್ಯಕ್ಕೊಳಗಾಗಿ ದೇಶಕ್ಕಾಗಿ ಪ್ರಾಣಾರ್ಪಣೆ ಮಾಡಿದ ಭಾರತೀಯರನೇಕರ ಕಥೆಗಳನ್ನು ಕೇಳಿದರೆ ನಮ್ಮ ಮೈನವಿರೇಳುತ್ತದೆ. ಬಾಪೂಜಿಯವರ ಸತ್ಯಾಗ್ರಹ ಚಳುವಳಿಯಲ್ಲಿ ಪುರುಷರಿಗೆ ಸ್ಫೂರ್ತಿನೆಲೆಯಾಗಿ ನಿಂತ ಸ್ತ್ರೀಯರ ಆದರ್ಶ ನೆಂತಹುದು ಎಂಬುದನ್ನು ಲೇಖಕರು ತಮ್ಮ ಈ ಕಥೆಯಲ್ಲಿ ಮನಮುಟ್ಟುವಂತೆ ಓದುಗರ ಮುಂದೆ ಇಟ್ಟಿದ್ದಾರೆ.

ಪಟೇಲ ಸುಬ್ಬರಾಯರು ಎಲೆ ಅಡಿಕೆ ಮೆಲ್ಲುತ್ತಿದ್ದರು. ಅದು ಅವರ ದೈನಂದಿನ ಪದ್ಧತಿ ಊಟಮಾಡಿದ ಕೂಡಲೆ ತಾಂಬೂಲವು ಸಿದ್ಧವಾಗಿರಬೇಕು. ಹೊತ್ತಿಗೆ ಸರಿಯಾಗಿ ಸ್ನಾನಮಾಡುವುದು ಆಹ್ನಿಕವನ್ನು ಮುಗಿಸುವುದು, ಊಟಮಾಡುವುದು ಇವುಗಳ ವಿಚಾರದಲ್ಲಿ ಊರೇ ಅವರನ್ನು ಮೆಚ್ಚಿಕೊಂಡಿತ್ತು. ಅವರ ಬಾಲ್ಯ ಸ್ನೇಹಿತರು ಸಿದ್ಧಾಂತಿ ಶೇಷಂಭಟ್ಟರು. ಸಿದ್ಧಾಂತಿ ಎಂಬುದು ಅವರ ಮನೆತನದ ಹೆಸರು. ಅವರ ಮುತ್ತಾತಂದಿರು ಪಂಚಾಂಗವನ್ನು ಗುಣಿಸುತ್ತಿದ್ದರಂತೆ. ಶೇಷಪ್ಪನವರಿಗಾದರೋ ಅವರ ತಂದೆಯ ತಿಥಿಯನ್ನು ಕೂಡ ಪುರೋಹಿತ ಕಂಠಪ್ಪನವರೇ ಹೇಳಬೇಕಾಗಿತ್ತು. ತಾಂಬೂಲವನ್ನು ಸೇವಿಸುವ ಸಮಯಕ್ಕೆ ಸರಿಯಾಗಿ ಶೇಷಂಭಟ್ಟರು ಅಲ್ಲಿಗೆ ಬರುವ ವಾಡಿಕೆ.

"ಬಾಪ್ಪ, ಏಕೋ ಇನ್ನೂ ಬರಲಿಲ್ಲ ಎಂದು ಕೊಂಡೆ" ಎಂದರು ರಾಯರು, ಶೇಷಂಭಟ್ಟರನ್ನು ನೋಡಿದ ಕೂಡಲೆ.

"ದಾರಿಯಲ್ಲಿ ಚಿಕ್ಕ ಅಡ್ಡಬಂತು !" ಎಂದರು ಭಟ್ಟರು ನಗುತ್ತ. ಎದುರಿಗೆ ಬಂದವರು ಅವರ ಭಾವಮೈದ.

ರಾಯರು ಎಲೆಪೆಟ್ಟಿಗೆಯನ್ನು ಶೇಷಪ್ಪನವರ ಮುಂದಕ್ಕಿಟ್ಟರು. ಲವಂಗದ ಖಾನೆಯಲ್ಲಿ ಒಂದು ಮಾತ್ರ ಉಳಿದಿತ್ತು. ಅದನ್ನು ಗಮನಿಸಿ ರಾಯರು ಒಂದು ಕೂಗು ಹಾಕಿದರು– "ಕಿಟ್ಟು ಏನೋ ಲವಂಗ ಇಲ್ಲವಲ್ಲೋ !" ಒಂದು ಹಿಡಿ ಲವಂಗ ಬಂತು. ತಾಂಬೂಲ ಸೇವನೆಯ ಕಾರ್ಯ ಸಾಂಪ್ರದಾಯಿಕವಾಗಿಯೇ ಮುಂದುವರಿಯಿತು. ಅದರಲ್ಲಿ ಶೇಷಪ್ಪರಾಯರಿಗೇನೂ ಕಡಿಮೆ ಇರಲಿಲ್ಲ.

—ಎಂ. ಜಿ. ವೆಂಕಟೇಶಯ್ಯ

"ಪತ್ರಿಕೆ ಬಂತೇನೋ ?"

"ಇನ್ನೂ ಇಲ್ಲ" ಎಂದು ಒಳಗಿನಿಂದ ಶಬ್ದ ಬಂತು.

"ಇನ್ನೇನು ಬರೋಹೊತ್ತೇ" ಎಂದರು ಶೇಷಪ್ಪ

ಪತ್ರಿಕೆ ಬರುವುದಕ್ಕೆ ಮೊದಲು ಪೋಲೀಸು ರಂಗರಾಜು ಒಳಗೆ ಬಂದು ಒಂದು ಸಲಾಂ ಹಾಕಿದ. 'ಇದನ್ನು ಪಟೇಲರಿಗೆ ಕೊಟ್ಟು ಬಾ ಎಂತ ಸಾಹೇಬರು ಕಳುಹಿಸಿದರು.''

ಎನ್ನುತ್ತ ಎರಡು ಚೀಟಿಗಳನ್ನು ಅವನು ರಾಯರ ಕೈಗೆ ಕೊಟ್ಟ. ರಾಯರು ತೆಗೆದುಕೊಂಡು ಪಕ್ಕದಲ್ಲಿಟ್ಟು ಅದರ ಮೇಲೆ ತಮ್ಮ ನಶ್ಯದ ಡಬ್ಬಿಯನ್ನಿಟ್ಟರು.

,,ಕಿಟ್ಟೂ, ರಂಗರಾಜು ಬಂದಿದ್ದಾನೆ. ನೋಡೋ !"

ಕಿಟ್ಟೊ ಅದನ್ನು ಒಳಗಿನಿಂದಲೇ ನೋಡಿದ್ದ. ರಾಯರ ಮಾತು ಕಿವಿಗೆ ಬಿದ್ದಕೂಡಲೆ, ಅವನು ಒಂದು ದೊಡ್ಡ ಹಲಸಿನಹಣ್ಣನ್ನೂ ಎಲೆಅಡಿಕೆಯನ್ನೂ ತಂದಿಟ್ಟ. ರಾಯರು ಅದನ್ನು ರಂಗಾರಾಜನಿಗೆ ಕೊಟ್ಟು ಅವನನ್ನು ಕಳಿಸಿಕೊಟ್ಟರು.

ದಿನಪತ್ರಿಕೆ ಬಂತು. ಅದರಲ್ಲಿನ ಸಮಾಚಾರವನ್ನು ಸ್ಥೂಲವಾಗಿ ಪರಾಂಬರಿಸಿದ್ದೂ ಆಯಿತು. ಅದರ ತುಂಬ ಸತ್ಯಾಗ್ರಹದ ವಿಚಾರವೇ.

1930. ದೇಶವು ದಾಸ್ಯಸ್ವಾತಂತ್ರ್ಯಗಳ ಸಾವು- ಬದುಕುಗಳ ಹೋರಾಟದಲ್ಲಿತ್ತು. ರಕ್ತಪಾತವಿಲ್ಲದೆ, ಯುದ್ಧವಾಗದೆ, ಭಾರತಕ್ಕೆ ಸ್ವಾತಂತ್ರ್ಯವು ಎಂದಿಗೂ ಸಿಗಲಾರದೆಂದು ಯುವಕರ ಮನಸ್ಸಿನಲ್ಲಿ ತುಂಬಿತ್ತು. ಸತ್ಯಾಗ್ರಹವೇ ನಮ್ಮ ದಾಸ್ಯದ ಸಂಕಲೆಗಳನ್ನು ಕಡಿದು ಹಾಕುವ ಮಹಾಶಸ್ತ್ರವೆಂದು ಮಹಾತ್ಮರು ಸಾರುತ್ತಿದ್ದರು. ಪಟೇಲ ಸುಬ್ಬರಾಯರಿಗೆ ಮಹಾತ್ಮರ ಮತದಲ್ಲಿ ಅತಿ ವಿಶ್ವಾಸ.

ರಂಗರಾಜು ತಂದುಕೊಟ್ಟಿದ್ದ ಚೀಟಿಗಳನ್ನು ರಾಯರು ನೋಡಿದರು. ನಕ್ಕರು.

"ಏನು ರಾಯರು ನಗುತ್ತಿದ್ದೀರಲ್ಲ?" ಎಂದ ಶೇಷಪ್ಪ. "ಈ ಸರಕಾರದ ಬೆದರಿಕೆ ನೋಡಿ ನಗೂಬಂತು." "ಸರಿಯೇ, ಕಾಡಿನಲ್ಲಿ ಬೆಳೆದಿರೋ ಗಿಡ ಕಡಿದು, ಸತ್ಯಾಗ್ರಹ ಎಂದರೆ ಯಾವ ಪುರುಷಾರ್ಥ ಸಾಧಿಸಿದ ಹಾಗೇಂದೆ? ಅದಕ್ಕೆ. ನಕ್ಕಿರಿ ಎಂದುಕೊಂಡೆ."

"ಹಾಗಲ್ಲಪ್ಪ ಮಹಾತ್ಮರ ಅಸ್ತ್ರದ ವಿಚಾರ ನಿನಗೆ ಗೊತ್ತಿಲ್ಲ ಅದು ಬ್ರಹ್ಮಾಸ್ತ್ರ ಇದ್ದ ಹಾಗೆ, ಈಗ ನಾವೆಲ್ಲ ಏನು ಮಾಡಬೇಕು, ಎಬೋದನ್ನ ಯೋಚಿಸಬೇಕು."

"ತಿಳಿದೇ ಇದೆ. 'ನೋವಿಷ್ಣುಃ ಪೃಥ್ವೀಪತಿಃ' ಅಂದರೆ ರಾಜನೇ ವಿಷ್ಣು—ಎಂದಮೇಲೆ, ಅವನ ಮೇಲೆ ಕೈಮಾಡುವುದೇ ?"

"ಅಯ್ಯಾ ಶೇಷಯ್ಯ ನಿನ್ನ ಅರ್ಥ ಸರಿಯಿಲ್ಲ. ಅದರ ಅರ್ಥ ಹೀಗೆ........ಈ ಭೂಮಿಗೆ ಒಡೆಯ ವಿಷ್ಣು. ಎಲ್ಲೋ ನಾಲ್ಕು ಸಾವಿರ ಮೈಲಿಯಾಚೆ ಕುಳಿತಿರುವ ಇಂಗ್ಲೆಂಡಿನ ದೊರೆಯಲ್ಲ, ಅಂತ! ಇದು ನಮ್ಮ ದೇಶಾನಯ್ಯಾ, ನಮ್ಮ ದೇಶ. ಅವರ ತಾತನ ಸೊತ್ತಲ್ಲ!"

"ಇದೇ ಮಾತೇ ನಮ್ಮ ಕುಟುಂಬದ್ದೂ! ನಮಗೋ ಹಿಂದಿನಿಂದ ಗಟ್ಟಿಮಾಡಿಸಿಬಿಟ್ಟಿದ್ದಾರೆ.- ಉಳಿದ ಮನುಜರ್ಗೆಲ್ಲಂ ಪೊರೆವನೆ ದೈವಂ !"

"ಶೇಷನ್ನಮ್ನೋರ ಮಾತು ಸತ್ಯ ಶೇಷಪ್ಪ. ನಮ್ಮ ಸತ್ಯ ನಿತ್ಯ ಎಲ್ಲ ಉಳಿದಿರೋದು ನಮ್ಮ ರಾಜ್ಯದ ಶೀಲ ಉಳಿಯಬೇಕಾದರೂ ಅವರಿಂದಲೇ ಅವರು ಕೆಟ್ಟರೆ ನಮ್ಮ ಸಂಸ್ಕೃತಿಗೆ ಅಧೋಗತಿ! ಮಹಾತ್ಮರು ಸತ್ಯಾಗ್ರಹ ಹೂಡಬೇಕು ಎಂದಮೇಲೆ ನಾವು ಹೂಡಬೇಕಾದದ್ದೇ. "

"ಮಹಾತ್ಮರು—ಅಂದರೆ ?

"ಏನಯ್ಯಾ,'ಮಹಾತ್ಮರು ಅಂದರೆ, ಮಹಾತ್ಮ ಗಾಂಧಿಯವರು.

ಕಾಲ ಕೆಟ್ಟುಹೋಯ್ತು ; ನಿಮ್ಮಂಥಾವರು ಕೂಡ ಅವರ ಮಾತು ಕೇಳಿಕೊಂಡು ಬ್ರಾಹ್ಮಣಿಕೇನ ನಾಶ ಮಾಡೋಕೆ ಸಿದ್ಧರಾಗಿದ್ದೀರಲ್ಲ !"

"ಅಯ್ಯೋ ಶೇಷಪ್ಪ, ನೀನಾಡುತ್ತಿರೋ ಮಾತಿನ ಅರ್ಥ ನಿನಗೇ ಗೊತ್ತಿಲ್ಲ! ಭಾರತ ಉಳಿದರೆ ಬ್ರಾಹ್ಮಣಿಕೆ. ಅದೇ ಹೋದರೆ ಇನ್ನು ಬ್ರಾಹ್ಮಣಿಕೆ ಹೇಗೆ ಉಳಿಯುತ್ತಪ್ಪ! ನಮ್ಮ ಜನರಿಗೆ ಅದರ ಅರ್ಥವೇ ತಿಳಿಯದು ! ಏಳಪ್ಪ, ಹೋಗಿ ನೋಡೋಣ."

× × × × × ×

ಊರಿನ ಅಶ್ವತ್ಥಕಟ್ಟೆ. ಅದೇ ಸಾರ್ವಜನಿಕ ಗಾಂಧಿ ಮೈದಾನ. ಜನ ಅಲ್ಲಿಗೆ ಬರುವುದಕ್ಕೆ ಮುಂಚಿತವಾಗಿಯೇ ಆಗಿನ ಬ್ರಿಟೀಷ್ ಸರಕಾರ ಐದುಮಂದಿ ಪೋಲೀಸರನ್ನು ಅಲ್ಲಿಗೆ ಕಳಿಸಿಕೊಟ್ಟಿತು. ಬಂದ ಜನ ಅವರನ್ನು ನೋಡಿದರು. ಬಂದ ಹಾಗೆ

ಸುಂಕವಿಲ್ಲ ಎಂದುಕೊಳ್ಳುತ್ತಾ ಹಿಂತಿರುಗಿದರು. ಅವರೂ ಒಂದು ಹತ್ತು ಜನ ಅಲ್ಲಿಯೇ ನಿಂತರು.

ರಾಯರು ಅಲ್ಲಿಗೆ ಬಂದರು. ಅವರ ಹಿಂದೆ ಶೇಷಪ್ಪ, ಕಾಳಪ್ಪ. ಅಲ್ಲಿ ನಿಂತಿದ್ದವರ ಪೈಕಿ ಪೈಲ್ವಾನ್ ಬೆಟ್ಟಪ್ಪ ಸ್ವಲ್ಪ ಧೈರ್ಯಸ್ಥ. ರಾಯರು ಅವನನ್ನೇ ಮಾತನಾಡಿಸಿದರು. —"ಏನು ಬೆಟ್ಟಪ್ಪ, ನಾಳಿನ ಸಮಾಚಾರ? ಸತ್ಯಾಗ್ರಹಕ್ಕೆ ಜನ ಏನಂತಾರೆ?"

ಜನರು ಹೆದರಿದ್ದಾರೆ. ಸತ್ಯಾಗ್ರಹಿಗಳ ಮನೆ ಮಠಗಳನ್ನು ಸರಕಾರ ಕಿತ್ತುಕೊಳ್ಳುತ್ತೆ ಎಂಬುದು ಅವರ ಭಯ. ಜನ ಸಿದ್ಧವಾಗಿಲ್ಲ – ಈ ಅಂಶಗಳನ್ನು ಬೆಟ್ಟಪ್ಪ ರಾಯರಿಗೆ ತಿಳಿಸಿದ.

"ನೀನೇನಂತೀ, ಬೆಟ್ಟಪ್ಪ"?

"ನಾ ಅಂಬೋದೇನಿದೆ ರಾಯರೆ? ನಿಮ್ಮ ಹಿಂದೆ ನಾನು—ಹನುಮಂತನ ಹಿಂದೆ ಬಾಲ!"

"ಅಂದರೆ, ನಾನು ಸತ್ಯಾಗ್ರಹಕ್ಕೆ ತಯಾರಾಗಿದ್ದೇನೆ ಎಂಬುದು ನಿನಗೆ ಹೇಗೆ ಗೊತ್ತಾಯಿತಯ್ಯ?"

"ನಮ್ಮ ದೇವರ ಸತ್ಯ ನನಗೆ ಗೊತ್ತಿಲ್ಲವೆ. ರಾಯರೇ? ನಡೀರಿ, ನಾವಿಬ್ಬರೇ ಹೋಗೋಣ ಕಡಿಯೋಣ. ಅವರು ಯಾವ ಜೈಲಿಗಾಗಲಿ ಹೇಗೆ ಕಳಿಸಬಲ್ಲರು?"

ತಿಂಗಳಬೆಳಕು ಹೆಪ್ಪುಗಟ್ಟಿದಂತಿರುವ ನೀರವ ರಾತ್ರಿ! ಪಶ್ಚಿಮದ ಗಾಳಿ ಬೀಸುತ್ತಿದೆ. ಶಾಂತಿಮಯವಾದ ಆ ವಾತಾವರಣವನ್ನು ಧಿಕ್ಕರಿಸುವಂತೆ ಐವತ್ತು ಮಂದಿ ಮುತ್ತೈದೆಯರು ಹೊರಟಿದ್ದಾರೆ. ಅಲ್ಲಲ್ಲಿ ಗುಂಪುಕೂಡಿ ನಡೆಯುತಿದ್ದಾರೆ. ಒಂದು ತಂಡದ ಯಜಮಾನಿ ಶೇಷಮ್ಮ. ಅವಳ ಎಡಗೈ ಬಲಗೈ ಇದ್ದಂತೆ ಮಾದಿ ಚೆನ್ನಿ. ಅವರಿಬ್ಬರ ತಲೆಯ ಮೇಲೆ ಗೂಡೆಗಳು. ಅವುಗಳಲ್ಲಿ ಅರಿಶಿನ ಕುಂಕುಮ ಗೌರೀ ಬಳೆಗಳು.

ಒಂದು ಮನೆಯ ಬಾಗಿಲಲ್ಲಿ ಶೇಷಮ್ಮನ ತಂಡ ನಿಂತಿತು. ಆ ಮನೆಯ ಸೊಸೆ ಈಚಗೆ ಬಂದಳು— "ಬನ್ನೀ ಶೇಷಮ್ಮನೋರೆ, ಬನ್ನೀ, ಒಳಗೆ ಬನ್ನೀ,"

"ಒಳಕ್ಕೆ ಬರೋಕೆ ಬಂಡಿಲ್ಲ ಈ ಮನೇಲಿ ಗಂಡಸರು ಎಂಬೋರು ಯಾರಾದರೂ ಇದ್ದರೆ ಈಚಗೆ ಕರೀ"

"ಇಲ್ಲದೆ ಏನಮ್ಮ, ಇದ್ದಾರೆ."

"ಕರೆಯಮ್ಮ ಆ ಗಂಡಸನ್ನ ಈಚೆಗೆ! ಎಲಾ ಭೀಮಸೇನಾ ಈಚೆಗೆ ಬಾ!" ಮನೆಯ ಯಜಮಾನ ಸುಂಕಪ್ಪ, ಅವನ ಮಗ ಕಕ್ಕಪ್ಪ, ಇಬ್ಬರೂ ಈಚೆಗೆ ಬಂದರು. "ಏನ್ ತಾಯೀ" ಎನ್ನುತ್ತ ಸುಂಕಪ್ಪ ನಮಸ್ಕಾರ ಮಾಡಿದ.

"ಅಯ್ಯಾ ನೀವು ಎಂಥಾ ಗಂಡಸರಯ್ಯ? ದೇಶಹಾಳಾಗ್ತಾಯಿದ್ದರೆ, 'ಉತ್ತರನ ಪೌರುಷ ಒಲೆ ಮುಂದೆ' ಎಂದಹಾಗೆ ನಿದ್ದೆ ಮಾಡ್ತಾಇದ್ದೀರಲ್ಲ. ಗಂಡಸರಾದರೆ ಬೇಗ್ಗ ರಾಯರ ಹಿಂದೆ ಸತ್ಯಾಗ್ರಹಕ್ಕೆ ನಡೆಯಿರಿ. ಇಲ್ಲದಿದ್ದರೆ ಮೀಸೆಬೋಳಿಸಿ ಬಳೆ ತೊಟ್ಟು ಕೊಂಡು ಅರಿಶಿನ ಕುಂಕುಮ ಇಟ್ಟು ಕೊಂಡು, ನನ್ನಹಾಗೇ ಸೀರೆ ಉಟ್ಟುಕೊಂಡು ಮನೇಲಿರಿ. ಎಲೇ ಚನ್ನಿ ಕೊಡಮ್ಮ ಅವರಿಗೆ ಬಳೇ!" ಎಂದು ವ್ಯಂಗವಾಗಿ ಶೇಷಮ್ಮ ನುಡಿದಳು.

ಲಜ್ಜೆಯಿಂದ ತಲೆಬಗ್ಗಿಸಿ, "ಯನ್ನರಸ, ಚೆನ್ನರಸ" ಹೇಳುತ್ತಿದ್ದ ಶೇಷಮ್ಮ ಈ ದಿನ ಕಠೋರವಾದ ದನಿಯಿಂದ, ಗಂಡಸರ ಎದೆಗೆ ಶೂಲವಾಗುವಂತೆ ಅವರನ್ನು ಹೀಯಾಳಿಸುತ್ತಿದ್ದಾಳೆ. ವಿರಾಟನ ಅರಮನೆಯಲ್ಲಿ ಹಿಂದೆ ದ್ರೌಪದಿ ಭೀಮನನ್ನು "ನಿಮ್ಮಯ ಬಾಳೇತಕ್ಕೆ?" ಎಂದು ಮೂದಿಲಿಸಿದ ಧ್ವನಿ ಈಗ ಆ ಊರಿನ ಹೆಂಗಸರ ಬಾಯಿಯಿಂದ ಹೊರಹೊರಡುತ್ತಿದೆ. ಇಂಥಾ ಶಕ್ತಿಯ ಮುಂದೆ ಯಾವ ಗಂಡಸು ನಿಲ್ಲಬಲ್ಲ! ಸುಂಕಪ್ಪ ಕಕ್ಕಪ್ಪ, ಯಾವ ಅಪ್ಪನೂ ಸತ್ಯಾಗ್ರಹ ತಂಡಕ್ಕೆ ಸೇರಲು ಒಪ್ಪಿಕೊಳ್ಳುತ್ತಿದ್ದಾರೆ. ಪ್ರತಿ ಮನೆಯಲ್ಲೂ

ಅತ್ತೆ ಸೊಸೆ ಒಂದಾಗಿ ಬಿಟ್ಟಿದ್ದಾರೆ. "ನಾವೂ ಬರ್ತೇವೆ ನಮಗೆ ಲಾಠಿ ಏಟಿನ ಭಯವಿಲ್ಲ. ನಮಗೇನು ಏಟು ಹೊಸದಲ್ಲ. ಗಂಡಸರು ಮನೆಯಲ್ಲಿರಲಿ. ಕೂಳು ಕುಚ್ಚಲಿ ನಮ್ಮ ಸೀರೆ ಒಗೆದು ಜೋಪಾನ ಮಾಡಿಟ್ಟಿರಲಿ" ಎನ್ನುತ್ತಿದೆ ಆ ಸ್ತ್ರೀ ಸಮೂಹ.

ಮನೆಮನೆಯ ಸೀತೆ ಸಾವಿತ್ರಿ ತಲೆ ಬಗ್ಗಿಸಿಕೊಂಡು ಗಂಡನ ಹಿಂದೆ ಹೋಗುವ ಬದಲು ತಲೆಯೆತ್ತಿಕೊಂಡು, ರಕ್ತ ಕುಂಕುಮ ಧರಿಸಿ, ನಿರ್ಭೀತಿಯಿಂದ ಸಿಪಾಯಿಯಂತೆ ಮುಂದಕ್ಕೆ ಹೆಜ್ಜೆ ಹಾಕುಹಾಕುತ್ತಿದ್ದಾರೆ ಆ ತಂಡದ ಹಿಂದೆ ದೀನವದನರಾಗಿ ಮೆಲ್ಲನೆ ಹೋಗುವ ಗತಿ ಗಂಡಸರದಾಗಿದೆ! ಇಂತಹ ತಂಡವನ್ನು ತಡೆಯಲು ಯಾವ ಸರ್ಕಾರಕ್ಕೆ ಸಾಧ್ಯ! ಎಷ್ಟು ಜೈಲುಗಳಾಗಬೇಕು ಇವರನ್ನು ಬಂಧಿಸುವುದಕ್ಕೆ ?

–3–

ಬೆಳಗಾಯಿತು. ಊರಿನ ಬೀದಿಯ ತುಂಬ ಜನ. ತಂಡ ತಂಡಗಳು ಎಲ್ಲೆಡೆ ಸತ್ಯಾಗ್ರಹಕ್ಕೆ ಹೊರಟಿವೆ. ಅವರ ಘೋಷಣೆ ದಿಕ್ಕು ದಿಕ್ಕುಗಳಿಗೂ ವ್ಯಾಪಿಸುತ್ತಿದೆ.

ಸತ್ಯಾಗ್ರಹವು ಯಶಸ್ವಿಯಾಯಿತು. ಆದರ ಪರಿಣಾಮವಾಗಿ ಮಿಲಿಟರಿ ರಾಜ್ಯವು ಆ ಪ್ರದೇಶದ ಮೇಲೆ ಬಿತ್ತು. ಸೈನಿಕ ಶಾಸನ ಆದೊಂದು ದಳ್ಳುರಿ. ಆದಕ್ಕೆ ಹಸ, ಕರು, ಇರುವೆ, ಹುಲಿ, ಜಿಂಕೆ ಮೊಲ ಇವೆಲ್ಲಾ ಒಂದೇ. ಎಲ್ಲವನ್ನೂ ದಹಿಸಿ ಬೂದಿ ಮಾಡುವುದೇ ಅದರ ಕರ್ತವ್ಯ.

ಸಿಪಾಯಿಗಳ ಲಾಟಿ ಪ್ರಹಾರದಿಂದ ನೂರಾರು ಜನರು ಕೆಳಗೆ ಬಿದ್ದರು; ಆದರೇನು ಮಿಕ್ಕವರು ಕಾಡಿನ ಸತ್ಯಾಗ್ರಹಕ್ಕೆ ಮೊದಲಿಟ್ಟರು, ರಾಯರಿಗೂ ಬಲವಾದ ಏಟೇ ಬಿತ್ತು. ಸುತ್ತಮುತ್ತಲಿದ್ದ ಹೆಂಗಸರು ಅವರನ್ನು ಮನೆಗೆ ಸಾಗಿಸಿದರು. ಕೆಲವರು ರಕ್ತವನ್ನು ಕಾರಿ ಕೆಳಗೆ ಬಿದ್ದು ಪ್ರಾಣ ಬಿಟ್ಟರು. ಆದರೆ ಆ ಸಮಾಚರ ಪೂರ್ತಿಯಾಗಿ ಯಾವ ಪತ್ರಿಕೆಯಲ್ಲಿಯೂ ಅಚ್ಚಾಗಿ ಬರಲಿಲ್ಲ.

–4–

ಸೈನಿಕ ಶಾಸನ ಜಾರಿಗೆ ಬಂತು. ರಾತ್ರಿಯಲ್ಲಿಯೂ ದೀಪದ ಬೆಳಕಿರಬಾರದು. ಜನ ಗುಂಪು ಕೂಡಿನಿಲ್ಲಬಾರದು. ಒಂದೊಂದು ಮನೆಯ ಮುಂದೆ ಒಬ್ಬೊಬ್ಬ ಸಿಪಾಯಿ ನಿಂತ.; ಪಟೇಲರ ಮನೆಯ ಮುಂದೆ ಕಾಡು ಕೋಣದಂತಹ ಸಿಪಾಯಿಯೊಬ್ಬ ನಿಂತ. ಅವನ ಹೆಸರು ಕೋಡರ್–ಎಂದು.

ಪಟೇಲನ ಪತ್ನಿ ಸೀತಮ್ಮನಿಗೆ ಹೆರಿಗೆ ದಿನಗಳು. ಕಾಲಸಮೀಪಿಸಿತು. ಮಧ್ಯರಾತ್ರಿ ಕಳೆದಿತ್ತು. ಬೆಳದಿಂಗಳು ಇನ್ನೂ ಇತ್ತು. ಪಕ್ಕದಲ್ಲಿಯೇ ಮಲಗಿದ್ದ ಮಾದಿಯನ್ನು ಸೀತಮ್ಮ ಕೂಗಿ ಎಬ್ಬಿಸಿದಳು. ವಿಚಾರವನ್ನು ಮೆಲ್ಲನೆ ತಿಳಿಸಿದಳು ಮೆತ್ತಗೆ ರಾಯರ ಬಳಿಗೆ ಬಂದು ಪಿಸುಮಾತಿನಲ್ಲಿ ಹೇಳಿದಳು. "ಅಮ್ಮಾವರು ಮೆತ್ತಗಿದ್ದಾರೆ"

"ಎಲ್ಲಾ ದೇವರ ದಯೆ!" ಎಂದರು ರಾಯರು.

ದೀಪ ಹಚ್ಚುವಂತಿಲ್ಲ. ಮಾಡೋದೇನು? ಎಲ್ಲಿ ಯಾವ ಶಬ್ಧವಾದರೆ ಯಾವ ಪಿಶಾಚಿ ಒಳಕ್ಕೆ ನುಗ್ಗಿ ಯಾರ ಪ್ರಾಣ ತೆಗೆದು ಬಿಡುತ್ತೋ! ಅಂಗೈಯಲ್ಲಿ ಪ್ರಾಣ ಹಿಡಿದುಕೊಂಡು ಕಾಲ ಕಳೆದರು. ಸುಮಾರು ಅರ್ಧಗಂಟೆಗೆ ಪ್ರಸವವಾಯಿತು. ಮಗು ಅತ್ತಿತು. ಪುಣ್ಯಕ್ಕೆ ಆ ಸಿಪಾಯಿ ಬಾಗಿಲನ್ನು ಒಡೆದುಕೊಂಡು ಬರಲಿಲ್ಲ.

ಗಂಡೋ? ಹೆಣ್ಣೋ? ಅಲ್ಲೇ ಮಲಗಿದ್ದ ಕಾಳಪ್ಪನಿಗೆ ನೋಡಬೇಕೆನ್ನಿಸಿತು. ಸಣ್ಣ ಬುಡ್ಡಿದೀಪ ಏತಕ್ಕೆ ಹಚ್ಚಬಾರದು? ಒಂದು ಕ್ಷಣ ಆರಿಸಿದರಾಯಿತು. ತನ್ನ ಕೈಚಾಚಿದ. ಅಲ್ಲೇ ಇತ್ತು ಬುಡ್ಡಿ-ಮೆಲ್ಲನೆ ಅದನ್ನು ತೆಗೆದುಕೊಂಡ. ಬತ್ತಿಯನ್ನು ಸ್ವಲ್ಪ ಎಳೆದ. ಹಚ್ಚಿದ.

ಮೇಲಕ್ಕೆದ್ದ. ಮಗುವಿನ ಬಳಿಗೆ ಬಂದು ನೋಡಿದ. ಆ ಬೆಳಕಿನಲ್ಲಿ ಚೆನ್ನಾಗಿ ಕಾಣಿಸಿತು-ಗಂಡು ಮಗು!

ರಾಯರಿಗೆ ಈ ಸಂತೋಷವಾರ್ತೆಯನ್ನು

ತಿಳಿಸಬೇಕು. ಆ ಕಡೆ ತಿರುಗಿದ. ದೀಪ ಕೈಯಲ್ಲಿ ಹಾಗೇ ಉರಿಯುತ್ತಿತ್ತು.

ಬಾಗಿಲು ಶಬ್ದ ! ಆ ಕಡೆನೋಡಿದ. ಬಾಗಿಲನ್ನು ಒಡೆದು ಒಳಗೆ ನುಗ್ಗಿದ್ದ ಸಿಪಾಯಿ-ಕೋಡರ್! ಅವನು ಕಾಳಪ್ಪನ ಕಡೆಗೇ ಬರುತ್ತಿದ್ದ. ಕಾಳಪ್ಪನಿಗೆ ಏನು ಮಾಡುವುದಕ್ಕೂ ತೋಚಲಿಲ್ಲ. ತನ್ನ ಬಲಗೈಯನ್ನು ಅಡ್ಡವಾಗಿಟ್ಟ. ಕೈಯಲ್ಲಿ ಉರಿಯುತ್ತಿದ್ದ ಬುಡ್ಡಿ ಕೋಡರ್‌ನ ಗಡ್ಡ ಸುಟ್ಟಿತು. ಕೋಡರ್ ಬಲವಾಗಿ ಒದ್ದ. ಕಾಳಪ್ಪ ಕೆಳಕ್ಕೆ ಬಿದ್ದ. ಏಳುವುದರೊಳಗಾಗಿ ಕೋಡರ್ ತನ್ನ ತುಪಾಕಿಯ ಭರ್ಜಿಯಿಂದ ಕಾಳಪ್ಪನ ಎದೆಗೆ ತಿವಿದ.

ಸೀತಮ್ಮ ಕಿರುಚಿದಳು. ಕೋಡರಿನ ದೃಷ್ಟಿ ಆ ಕಡೆಗೆ ಸಾಗಿತು. ಮಗು ಕಾಣಿಸಿತು. ಆದರೇನು ! ಅದರ ಕುತ್ತಿಗೆಯ ಮೇಲೆಯೆ ತನ್ನ ಬೂಡ್ಸುಕಾಲನ್ನಿಟ್ಟು ತುಳಿದುಬಿಟ್ಟ. ಕಾಳಪ್ಪ ಅವನ ಮೇಲೆ ಬೀಳಲು ಮೇಲಕ್ಕೆದ್ದ. ಅದನ್ನು ನೋಡಿದ ಕೋಡರ್ ಅವನ ಮೇಲೆ ಗುಂಡನ್ನು ಹಾರಿಸಿದ. ಆ ಶಬ್ದ ಆಚೆಗೆ ಕೇಳಿಸಿತು.

ಕೆಳಗೆ ಬಿದ್ದಿದ್ದ ಬುಡ್ಡಿಯ ದೀಪ ಅಲ್ಲಿದ್ದ ಹುಲ್ಲಿನ ಕಂತೆಯನ್ನು ಹೊತ್ತಿಸಿತು. ಕ್ಷಣಮಾತ್ರದಲ್ಲಿ ಹೊಗೆ ಬೆಂಕಿ ಕಾಣಿಸಿಕೊಂಡವು. ಸುತ್ತ ಮುತ್ತಲಿನ ಮನೆಯವರು ಈಚೆಗೆ ಬಂದರು. ಅಲ್ಲಿದ್ದ ಸಿಪಾಯಿಗಳು ಗುಂಡು ಹಾರಿಸಿದರು. ಹತ್ತಾರು ಹೆಣಗಳು ಭೂಮಿಗೆ ಬಿದ್ದವು.

ಮನೆಯ ಒಳಗಿನಿಂದ ಪಟೇಲರನ್ನು ಈಚೆಗೆ ಸಾಗಿಸಿ ತಂದರು. ನಾಲ್ಕಾರು ಶಿಪಾಯಿಗಳು ಒಳಕ್ಕೆ ಕೋಡರ್‌ನನ್ನು ಹೊತ್ತು ತಂದರು.ಅವನ ಬಲಗಾಲು ಸುಟ್ಟುಹೋಗಿತ್ತು. ಮಗು ಸತ್ತಿತ್ತು. ಸೀತಮ್ಮ ಅಗ್ನಿಗೆ ಆಹುತಿಯಾದಳು.

** ** **

ಈ ಸತ್ಯಾಗ್ರಹದ ವಿಚಾರವಾಗಿ ಬ್ರಿಟಿಷ್ ಪತ್ರಿಕೆಗಳು ಅನೇಕ ಲೇಖನಗಳನ್ನು ಪ್ರಕಟಿಸಿದವು. ಕೋಡರ್ ಸಿಪಾಯಿಯ ಧೈರ್ಯವನ್ನು ವರ್ಣಿಸಿದವು. ಆಗಿನ ಸರ್ಕಾರವು ಅವನಿಗೆ ಒಂದು ದೊಡ್ಡ ಅಧಿಕಾರವನ್ನು ಕೊಟ್ಟಿತು. ಅವನಿಗೆ ಪ್ರಾಣಭಯವನ್ನು ತಪ್ಪಿಸಬೇಕೆಂದು ಅವನನ್ನು ಕಲ್ಕತ್ತೆಗೆ ವರ್ಗಾಯಿಸಿತು. ಕಾಲ ಕ್ರಮೇಣ ಅವನ ಹುದ್ದೆ ಏರುತ್ತಾ ಬಂತು.

ಎರಡು ವರ್ಷಗಳ ನಂತರ ಲಾಹೋರಿನಲ್ಲಿ ನಡೆದ ಒಂದು ಕೊಲೆ ಪತ್ರಿಕೆಯಲ್ಲಿ ಹೀಗೆ ಪ್ರಕಟವಾಯಿತು– "ಪೋಲಿಸ್ ಸರ್ವಾಧಿಕಾರಿಯ ಕೊಲೆ ! ಲಾಹೊರಿನ ಉನ್ನತ ಪೋಲಿಸು ಅಧಿಕಾರಿಯಾಗಿದ್ದ ಕೋಡರ್ ಅವರು ತಮ್ಮ ಕಛೇರಿಯಲ್ಲಿದ್ದಾಗ ಇಬ್ಬರು ಯುವಕರು ಅವರನ್ನು ನೋಡಲು ಬಂದರು. ಖಾಸಾ ಆಫೀಸಿನೊಳಕ್ಕೆ ಹೋದರು ಒಂದೆರಡು ಕ್ಷಣದಲ್ಲಿಯೇ ಗುಂಡು ಹಾರಿಸಿದ ಶಬ್ದ ಕೇಳಿಬಂತು. ಆಫೀಸಿನ ಜನರು ಒಳಕ್ಕೆ ನುಗ್ಗಿದರು. ಅವರನ್ನು ದಾಟಿಕೊಂಡು ಆ ಇಬ್ಬರು ಯುವಕರೂ ಕಛೇರಿಯಿಂದ ಪರಾರಿಯಾದರು. ಕೋಡರ್ ಸಾಹೇಬರು ಕುರ್ಚಿಗೆ ಒರಗಿಕೊಂಡೇ ಪ್ರಾಣ ಬಿಟ್ಟಿದ್ದರು. ಅವರ ಎದೆಯಲ್ಲಿ ನಾಲ್ಕುಕಡೆ ಗಾಯವಾಗಿತ್ತು; ರಕ್ತ ಹರಿಯುತ್ತಿತ್ತು. ಕೊಲೆಪಾತಕರನ್ನು ಹಿಡಿಯಲು ಪೋಲಿಸು ಅಧಿಕಾರಿಗಳು ತಕ್ಕ ಕ್ರಮವನ್ನು ತೆಗೆದುಕೊಂಡಿರುತ್ತಾರೆ." —

## ದೇವರ ದಯೆ

"ತಗ್ಗಿನ ಪ್ರದೇಶದ ಕಡೆ ಹರಿದು ಕೊಂಡು ಹೋಗುವ ಸ್ವಭಾವವಿರುವ ನೀರು ಕೂಡ ಸೂರ್ಯಕಿರಣದ ಸಹಾಯದಿಂದ ಆಕಾಶಕ್ಕೆ ಏರುವುದು. ಇದರಂತೆಯೇ ವಿಷಯ ವಸ್ತುಗಳ ಕಡೆಗೆ ಹೋಗುವ ಸ್ವಭಾವವುಳ್ಳ ಮನಸ್ಸು ಕೂಡ ದೇವರ ದಯೆಯಿಂದ ಮೇಲೇರುವುದು"

—ಶ್ರೀ ಮಾತೆ ಶಾರದಾದೇವಿ.

# ಭು ವಿ ಗಿ ಳಿ ದ



## ಇಳಿಹಾಳ ಬೊಮ್ಮಯ್ಯ

—ಹೆಚ್. ಜಿ. ರಾಧಾದೇವಿ

# ಶಿವತಾನು ಇವರಿಗೊಲಿದು

ಈಗಿನ ಬಾಗಿಲ ಕೋಟೆ ಉತ್ತರಕ್ಕೆ ಹತ್ತುಮೈಲಿಗಳಾಚೆ ಇಲ್ಲಾಳ ಎಂಬ ಊರಿತ್ತು. ಆ ಊರಿನಲ್ಲಿ ಬೊಮ್ಮಯ್ಯನೆಂಬ ಪ್ರಸಿದ್ಧನಾದ ಶಿವ ಶರಣನಿದ್ದ. ಅವನು ಕಾಯಕದಿಂದ ರೈತ.

ಮೇಲ್ನೋಟಕ್ಕೆ ಹೊಲದಂಡೆ ಪ್ರಧಾನವಾದ ಹೊಲದಲ್ಲಿ ಚೆನ್ನಾಗಿ ಕೃಷಿ ಮಾಡಿ ಒಳ್ಳೆಯ ಬೆಳೆ ತೆಗೆದು ಅರಸನಿಗೆ ಸುಂಕ ಕೊಡುವಷ್ಟು ಒಳ್ಳೆಯ ಸಿರಿವಂತ ನಾಗಿದ್ದುದಲ್ಲದೇ ........ ಅಂತರಂಗದಲ್ಲಿ ಮನವೆಂಬ ನೇಗಿಲಿನಿಂದ ಹೃದಯವೆಂಬ ಹೊಲ ಉತ್ತು ಶಿವನಾಮ ಬೀಜ ಬಿತ್ತಿ ಭಕ್ತಿ ಎಂಬ ನೀರೆರೆದು ಪೋಷಿಸುತ್ತಿದ್ದ.

ತನ್ನ ಸಿರಿಸಂಪತ್ತಿಗೆ ಅಹಂಕರಿಸದೆ ಅವನು ಜಂಗಮರನ್ನು ಸತ್ಕರಿಸುತ್ತ ಶಿವದಾಸೋಹ ನಡೆಸು ತ್ತಿದ್ದ.

ಒಮ್ಮೆ ಅವನ ಜೀವನದಲ್ಲಿ ಒಂದು ಅಗ್ನಿ ಪರೀಕ್ಷೆ ಬಂದಿತು. ಆಗ ಇಳಿಹಾಳದ ಸುತ್ತಮುತ್ತಲು ಎಲ್ಲೆಲ್ಲೂ ಬರಗಾಲ ಬಂದಿತ್ತು. ಮಳೆಯಿಲ್ಲ, ಬೆಳೆಯಿಲ್ಲ; ರೈತರೆಲ್ಲ ಚಿಂತಿತರಾದರು. ಭೂಮಿ ಒಣಗಿ ಬಿರುಕು ಬಿಟ್ಟು ಸುರು ಸುರು ಎಂದವು ಪಶುಗಳು, ಬಡಕಲಾಗಿ ಹಸಿರು ಹುಲ್ಲು, ಹೊಸನೀರಿಗಾಗಿ ಹಂಬಲಿಸಿ ಆಗಸ ಡೆಡೆಗೆ ಮೊಗವೆತ್ತಿ ನಿಂತವು. ಮರಗಿಡಗಳು ಕರಿಕಲಾಗಿ ಸೀದು ಹೋದವು.

ಜನ ಆಹಾರಕ್ಕಾಗಿ ಹಾಹಾಕಾರವೆಬ್ಬಿಸಿ ದರು. ಎಲ್ಲಿ ಹುಡುಕಿದರೂ ಒಂದು ಕಾಳಿಲ್ಲ. ಜನ ಬೊಮ್ಮಯ್ಯನಿಗೆ ದುಂಬಾಲು ಬಿದ್ದರು. "ಬೊಮ್ಮಯ್ಯ ಪರಮಶಿವಭಕ್ತ ನೀನು.... ಮಳೆಗಾಗಿ ಶಿವನನ್ನು ಪ್ರಾರ್ಥಿಸಬಾರದೇಕೆ?" ಬೊಮ್ಮಯ್ಯ ಅವರ ಮಾತಿಗೆ ಸಂಕೋಚಗೊಂಡ, ಅವನು ಹರನಿಗೆ ಕೊಡು ಕೊಳ್ಳುವಿಕೆಗೆ ಮೀರಿದ ಭಕ್ತ.

ಆದರೆ ಮಾಡುವುದೇನು? "ಶಿವನನ್ನು ಬೇಡ ಲಾರೆ, ಶಿವನಾಮ ಮನಸಾರೆ ಭಜಿಸುವೆ, ಬೇಡದೆ ಕೊಡುವ ಕರುಣಾಳು ಅವನಾದರೆ ಕೊಡಲಿ.... ಅವನಿಗಿಂತ ಈ ಭವದ ಬರವೇ ಹಿರಿದಾದರೆ...... ಹೀಗೇ ಇರಲಿ" ಎಂದ. ಆರಾತ್ರಿ ಸಂಗಡಿಗರೊಂದಿಗೆ ಶಿವನಾಮಾಮೃತ ಸ್ಮರಣೆಯೊಡನೆ ಜಾಗರಣೆ ಮಾಡಿದ.

ಬೇಡದ ಭಕ್ತ ತನ್ನ ನಿಯಮ ಮುರಿದು ಬೇಡಿ ಬಾಗ ಬೇಕೆಂದು ಹರನೇನು ಹಟ ತೋರಲಿಲ್ಲ. ಆತ ಭೋಳೆ ಶಂಕರನಲ್ಲವೆ ?.... ಶಿವ ತನ್ನ ನಾಮ

ಸ್ತುತಿಗೆ ಒಲಿದ. ಆ ದಿನ ಬೆಳಗ್ಗೆಯೇ ಮಳೆಯಾಯಿತು. ಆದರೆ ಬಿತ್ತಲು ಕಾಳು? ಬೊಮ್ಮಯ್ಯನನ್ನೇ ಮುಂದು ಮಾಡಿಕೊಂಡು ಎಲ್ಲರೂ ರಾಜನ ಬಳಿಗೆ ನಡೆದರು. ಬರದ ಬಿಸಿ ರಾಜಧಾನಿಯನ್ನು ಬಿಟ್ಟಿರಲಿಲ್ಲ. ಆದರೆ ಶಿವನಾಮ ಸ್ಮರಣೆಯಿಂದ ಇಳಿಹಾಳದಲ್ಲಿ ಮಳೆ ಆಯಿತೆಂದು ರಾಜನಿಗೆ ನಂಬಿಕೆ ಬರಲಿಲ್ಲ.

ಆಳುಗಳನ್ನು ಅಟ್ಟಿ ಪರಿಶೀಲಿಸಿದ, ಹತ್ತು ಹಳ್ಳಿ ನಡೆದ ನಂತರ ಸಿಕ್ಕಿದ ಇಳಿಹಾಳದ ನೆಲವನ್ನು ಪರಿಶೀಲಿಸಿ ಬಂದ ಚಾರಕರು—

"ಸುತ್ತ ಹತ್ತು ಹಳ್ಳಿಯಲ್ಲಿ ಪರಿಶೀಲಿಸಿದೆವು; ಒಂದು ಹನಿ ನೀರು ನೆಲಕ್ಕೆ ಹರಿದಿಲ್ಲ; ಆದರೆ ಇಳಿಹಾಳದ ಭೂಮಿ ಮಾತ್ರ ಮಳೆಯಲ್ಲಿ ನೆಂದಿದೆ" ಎಂದು ವರದಿ ಒಪ್ಪಿಸಿದರು. ರಾಜನು ಒಂದು ಚೀಲ ಬಿತ್ತನೆ ಕಾಳುಗನ್ನು ತರಿಸಿ ಅವರ ಹಳ್ಳಿಯ ಪರವಾಗಿ ಬೊಮ್ಮಯ್ಯನಿಗೆ ಕೊಟ್ಟು "ಒಂದು ಕಾಳೂ ಪೋಲಾಗಬಾರದು; ಜನತೆಯ ಪರವಾಗಿ ಕಾಯ್ದಿಟ್ಟ ಕಾಳಿದು" ಎಂದು ಎಚ್ಚರಿಸಿದ.

ಬೊಮ್ಮಯ್ಯ ಕಾಳು ಪಡೆದು ಊರಿಗೆ ಬಂದ. ಆದರೆ ಈ ವೇಳೆಗೆ ಮೂರು ದಿನವಾದ್ದರಿಂದ ಭೂಮಿ ಆರಿತ್ತು ಬೊಮ್ಮಯ್ಯ ಕಾಳೆಲ್ಲ ಹಂಡೆಯಲ್ಲಿ ನೆನೆಹಾಕಿದ. ಚೆನ್ನಾಗಿ ನೆಂದ ಕಾಳನ್ನು ಮಾರನೆಯದಿನ ಬಿತ್ತೋಣವೆಂದು ಕಾಳನ್ನು ಬುಟ್ಟಿಯಲ್ಲಿ ಹೊರಿಸಿಕೊಂಡು ಹೊಲದ ಬಳಿ ಬಂದಾಗ ರೈತರು ನೆಲ ಅಗೆಯುತ್ತಿದ್ದರು. "ಸಿರಿಗಿರಿ ಮಹಂತ ಮಲ್ಲಯ್ಯ ಉಘೇ........ ಉಘೇ........ ಶ್ರೀಶೈಲ ಮಲ್ಲಿಕಾರ್ಜುನ ಜಯಾ ಜಯ ಭೋ" ಎಂಬ ಜಯ ಘೋಷ ಕೇಳಿಸಿತು. ಬೊಮ್ಮಯ್ಯ ಪುಳಕಿತನಾಗಿ ತಲೆ ಎತ್ತಿ ನೋಡಿದ.

ಶ್ರೀಶೈಲದ ಮಲ್ಲಯ್ಯನ ಪರಿಷೆಗೆ ಹೋಗುತ್ತಿರುವ ಭಕ್ತರ ಸಮೂಹ ಬರುತ್ತಿದೆ. ಅದೆಷ್ಟು ದೂರದಿಂದ ಕಾಲ್ನಡಗೆಯಲ್ಲಿ ಬಂದವರೋ! ಹಸಿದು ಆಯಾಸ ಗೊಂಡಿದ್ದರು. ಬುಟ್ಟಿಯಲ್ಲಿದ್ದ ನೆನೆದ ಕಾಳನ್ನು ಕಂಡು—

"ತಂದೆ ಹಸಿದ ನಮಗೆ ಬೊಗಸೆ ಕಾಳು ನೀಡು" ಎಂದು ಕೈಯೊಡ್ಡಿದರು. ಮಲ್ಲಯ್ಯನ ಭಕ್ತರಿಗೆ ಇಲ್ಲೆನ್ನುವನೆ ಬೊಮ್ಮಯ್ಯ? ಬೊಗಸೆ-ಬೊಗಸೆ ಎಲ್ಲರಿಗು ನೀಡಲಾರಂಭಿಸಿದ ಎಲ್ಲರೂ ತಿಂದುಂಡು ನಲಿದು ನಡೆದರು.

ಇತ್ತ ನೆಲ ಅಗೆದು ಬಂದ ರೈತರು ಕಂಡದ್ದೇನು? ಖಾಲಿಯಾಗಿದ್ದ ಬುಟ್ಟಿಗಳು! ಅವರ ಮೈ ಉರಿಯಿತು. "ಬೊಮ್ಮಯ್ಯ ಬಿತ್ತುವ ಕಾಳೆಲ್ಲಿ?" ಎಂದು ಕೇಳಿದರು. "ಶಿವಕೊಟ್ಟಿದ್ದು ಶಿವಭಕ್ತರಿಗೆ ಪ್ರೀತಿಯಾಯಿತು...." ಎಂದು ಶಾಂತನಾಗಿ ನುಡಿದ ಬೊಮ್ಮಯ್ಯ. ರೈತರ ಸಹನೆಯ ಕಟ್ಟೆಯೊಡೆಯಿತು. "ಶಿವನಲ್ಲ ಕೊಟ್ಟದ್ದು; ರಾಜ. ಭಂಡಾರದ ಆಹಾರದ ವಿಭಾಗದಿಂದ ಕೊಡಿಸಿದ ಕಾಳದು. ಒಂದು ಕಾಳು ನಷ್ಟವಾದರೂ ನಮ್ಮೆಲ್ಲರ ತಲೆದಂಡ ನಿನಗೆ ಗೊತ್ತೆ? ರಾಜರು ಬಿತ್ತನೆಗೆ ಕೊಟ್ಟದ್ದು, ಶಿವಭಕ್ತರು ಉಣಲೆಂದಲ್ಲ" ಎಂದು ಗುಡುಗಿದರು.

ಉಳಿದೈದು ಕಾಳುಗಳನ್ನು ಮಾತ್ರ ನೆಲದಲ್ಲಿ ಬಿತ್ತಿದ ಬೊಮ್ಮಯ್ಯ. "ಹರಭಕ್ತರು ಉಂಡು ತೃಪ್ತರಾಗಿ ಹೋದಮೇಲೆ ನಮ್ಮೂರಿಗೆ ಬರಗಾಲದ ಭಯವೆಲ್ಲಿ ಬಂಧುಗಳೆ?" ಎಂದ.

ರೈತರು ಕ್ರೋಧೋನ್ಮತ್ತರಾಗಿ ಸಿಡಿದೆದ್ದರು. ನಿನಗೆ ರಾಜನಿಂದಲೇ ಶಿಕ್ಷೆ ಕೊಡಿಸುತ್ತೇವೆ. ಆಗ ನಿನ್ನ ಶಿವಭಕ್ತರ ಮಹಿಮೆ ಗೊತ್ತಾಗುತ್ತದೆ. ಎಂದು ಗುಂಪುಗೂಡಿ ರಾಜಧಾನಿಗೆ ನಡೆದರು. ರಾಜನ ಬಳಿ ಹೋಗಿ ಬೊಮ್ಮಯ್ಯನ ಮೇಲೆ ದೂರಿದರು. ರಾಜ ಕ್ರೋಧೋನ್ಮತ್ತನಾಗಿ ಆಳುಗಳನ್ನು ಅಟ್ಟಿ ಕಾಳು ಪೋಲು ಮಾಡಿದ ಅಪರಾಧಕ್ಕಾಗಿ ಉಗ್ರ ಶಿಕ್ಷೆಯನ್ನು ವಿಧಿಸಲು ಅವನನ್ನು ಕರೆಸಿಕೊಂಡನು

ಆದರೆ ಇವರು ನಡೆದು ರಾಜಧಾನಿಗೆ ಹೋಗಿ ರಾಜನಿಗೆ ದೂರಿ, ರಾಜ ಆಳುಗಳನ್ನು ಅಟ್ಟಿ, ಆ ಆಳುಗಳು ಇಳಿಹಾಳಕ್ಕೆ ಬರಲು ಮೂರು ದಿನ ಹಿಡಿಯಿತು. ಏಕೆಂದರೆ ಆಗಿನ ಕಾಲದಲ್ಲಿ

[ 30 ನೇ ಪುಟ ನೋಡಿ]

# 1975 – ಮಹಿಳಾ ವರ್ಷ

—ಎಂ. ಕೆ. ಇಂದಿರಾ

ಯುನೆಸ್ಕೋದವರು ೧೯೭೫ ನೇ ಇಸವಿಯನ್ನು ಅಂತರರಾಷ್ಟ್ರಿಯ ಮಹಿಳಾ ವರ್ಷವೆಂದು ಘೋಷಿಸಿದರೆಂದು ಈಗ ನಾವು ಭಾರತೀಯರೂ ಮಹಿಳಾವರ್ಷವನ್ನು ಆಚರಿಸುತ್ತಿದ್ದೇವೆ. ಇಡೀ ಭಾರತ ಮಹಿಳಾವರ್ಷದ ಆಚರಣೆಯಲ್ಲಿ ಕುಣಿಯುತ್ತಿದೆ. ಗತ್ಯಂತರವಿಲ್ಲದೆ ನಾವೂ ಇದರಲ್ಲಿ ಪಾಲ್ಗೊಳ್ಳುತ್ತಿದ್ದೇವೆ. ಆದರೆ ಇದರ ಅರ್ಥ ಮಾತ್ರ ನಮಗಾಗಿಲ್ಲ. ಯಾರನ್ನು ಕೇಳಿದರೂ ಸಮರ್ಪಕ ಉತ್ತರ ಸಿಗಲಾರದು.

ಜಗತ್ತು ಹುಟ್ಟಿದಾಗಲೇ ಪ್ರಕೃತಿ-ಪುರುಷ ಒಟ್ಟಿಗೇ ಅವತರಿಸಿದರು. ಮತ್ತೆ ಈ ಜಗತ್ತು ಇರುವವರೆಗೂ ಒಂದಾಗಿಯೇ ಇರುತ್ತಾರೆ. ಇವೆರಡೂ ಜೀವಗಳು ಒಂದಾಗಿಲ್ಲದಿದ್ದರೆ ಈ ಜಗತ್ತು ಇಲ್ಲವೇ ಇಲ್ಲ. ಸೃಷ್ಟಿಕಾರ್ಯವೇ ಇಲ್ಲದ ಮೇಲೆ ಇನ್ನು ಸಂಚಾಲನೆ ಎಲ್ಲಿ ಬಂತು ?

ಶಕ್ತಿ, ಗುಣ, ರೂಪ, ಲಿಂಗಗಳಿಂದ ಸೃಷ್ಟಿಕರ್ತ ಸ್ತ್ರೀ-ಪುರುಷರಲ್ಲಿ ಪ್ರಭೇದ ಇಟ್ಟು ಅವರ ಪ್ರತ್ಯೇಕತೆಯನ್ನು ಕಾಣಿಸಿದ್ದಾನೆ. ಈ ಸೃಷ್ಟಿರಹಸ್ಯವನ್ನು ಬಿಡಿಸಲು ಆ ಸೃಷ್ಟಿಕರ್ತನೇ ಬರಬೇಕಲ್ಲದೆ ಬೇರೆಯವರಿಂದ ಸಾಧ್ಯವೇ ಇಲ್ಲ.

ವೇದಕಾಲದಿಂದಲೂ ಸ್ತ್ರೀ ಪುರುಷರಿಗೆ ಅವರ ಪಾಲಿನ ಕರ್ತವ್ಯ, ಕೆಲಸಗಳು ನಿಯಮಿತವಾಗಿವೆ. ಮನು-ಮಾಂಧಾತರ ಕಾಲದಿಂದಲೂ ಈ ನಿಯಮಗಳು ನಡೆದು ಬಂದಿರುವುದರಿಂದ ಇಂದಿನ ಆಧುನಿಕ ಸ್ತ್ರೀ ಆದಿ ಪುರುಷರ ಮೇಲೆ ಸಿಡಿದೆದ್ದಿದ್ದಾಳೆ. ಕಾರಣ ವೇದ, ಪುರಾಣ, ಉಪನಿಷತ್ತುಗಳನ್ನು ಬರೆದವರು ಪುರುಷರು. ಅವರು ಸ್ವತಂತ್ರವನ್ನೆಲ್ಲಾ ತಮ್ಮ ಪಾಲಿಗೆ ಉಳಿಸಿಕೊಂಡು ಸ್ತ್ರೀಯನ್ನು ಕೇವಲ ತಮ್ಮ ಭೋಗವಸ್ತು ಮತ್ತು ಜೀತದಾಳಿನಂತೆ ಬಳಸಿಕೊಂಡು ಆಕೆಯನ್ನು ಪಂಜರದ ಗಿಳಿಯನ್ನಾಗಿ ಮಾಡಿ ಆಕೆಯಲ್ಲಿ ಇರಬಹುದಾದ ಅನೇಕ ಶಕ್ತಿ, ಸಾಮರ್ಥ್ಯಗಳನ್ನು ಕುಂಠಿತಗೊಳಿಸಿದ್ದಾರೆ ಎಂಬುದು ಅನೇಕ ಧೀಮಂತ ಮಹಿಳೆಯರ ಅನಿಸಿಕೆ. ಮಹಿಳೆಯರ ಪರವಾಗಿ ಆ ಮಾತನ್ನು ಒಪ್ಪಿಕೊಳ್ಳೋಣ. ಆದರೆ ಮುಂದೆ ಈ ಅಪವಾದವನ್ನು ಒಂದು ಬದಿಗಿಟ್ಟು ಪುರುಷ ಯಾವ ಕಾರಣಕ್ಕಾಗಿ 'ನ ಸ್ತ್ರೀ ಸ್ವಾತಂತ್ರ್ಯಮರ್ಹತಿ'- ಎಂಬುದಾಗಿ ಹೇಳಿದ್ದಾನೆಂಬುದು ಮಾತ್ರ ಬಹಳ ಗಹನವಾಗಿ ಯೋಚಿಸಬೇಕಾದ ಅಂಶ. ಈ ಬಗ್ಗೆ ಇತ್ತೀಚೆಗೆ ಸಾಕಷ್ಟು ಚರ್ಚೆಗಳು, ಗೋಷ್ಠಿಗಳು ನಡೆದು ಕ್ರಾಂತಿಯ ಗಾಳಿ ಬೀಸುತ್ತಿದೆ. ದಿಟ ಹೇಳಬೇಕೆಂದರೆ ಮೊದಲಿನಿಂದಲೂ ಮಹಿಳೆಗೆ ಅತಿ ಸ್ವಾತಂತ್ರ್ಯ ಕೊಡದಿದ್ದರೂ ನಮ್ಮ ಭಾರತೀಯ ಪುರುಷರು ಮಹಿಳೆಯನ್ನು ಒಂದು ಗೌರವದ ಸ್ಥಾನದಲ್ಲಿಟ್ಟಿದ್ದಾರೆ. ಆಕೆ ಎಷ್ಟೇ ಶಕ್ತಿವಂತಳಾದರೂ ಪುರುಷನ ಶಕ್ತಿಗೂ, ಮಹಿಳೆಯ ಶಕ್ತಿಗೂ ಬಹಳ ಅಂತರವಿದೆ. ದೇಹಬಲ, ಮನೋಬಲ ಎರಡರಲ್ಲೂ ಮಹಿಳೆ ಒಂದು ಮೆಟ್ಟಿಲು ಕೆಳಗೆ. ಇದು ಮಹಿಳೆಗೆ ಜನ್ಮತಃ ಬಂದಿರುವ ದೌರ್ಬಲ್ಯ ಆದರೆ ಪಾಶ್ಚಿಮಾತ್ಯರಲ್ಲಿ ಸ್ತ್ರೀಪುರುಷರಲ್ಲಿ

ಸಮಾನ ಸ್ವಾತಂತ್ರ್ಯವಿದೆ ನಿಜ. ಅವರಲ್ಲಿ ಮಹಿಳೆಗೆ ವೈಧವ್ಯವೆಂಬುದೇ ಇಲ್ಲ; ಶೀಲ, ಶಾಲೀನತೆ, ಲಜ್ಜೆ ಇವುಗಳ ಬಂಧನವಿಲ್ಲ. ನಮ್ಮ ಪುರುಷರು ಮಹಿಳೆಯ ಶೀಲಸಂಪತ್ತು' ಸಂಸ್ಕೃತಿ, ಶಾಲೀನತೆಗಳನ್ನು ಉಳಿಸಲು ಈ ಕೆಲವು ನಿಬಂಧನೆಗಳನ್ನು ಮೊದಲಿನಿಂದ ಹಾಕಿಕೊಂಡು ಬಂದಿದ್ದರು. ಆದರೆ ಭಾರತೀಯರು ಅದರಲ್ಲೂ ಹಿಂದೂ ಮಹಾಪುರುಷರು ಮಹಿಳೆಯ ರಕ್ಷಣೆಗಾಗಿ ಹಾಕಿದ ಈ ಮರ್ಯಾದೆಯ ಬೇಲಿ ಸುಭದ್ರವಾದ-ದಲ್ಲ; ಅಲ್ಲದೆ ಅದನ್ನು ಮಹಿಳೆ ಇದು ನಮ್ಮ ರಕ್ಷಣೆಗಾಗಿ ಎಂಬುದನ್ನು ಮರೆತು ಇದು ನಮ್ಮ ಬಂಧನ ಎಂದು ತಿಳಿಯ ತೊಡಗಿದಳು. ಆಕೆಗೆ ಸ್ವಾತಂತ್ರ್ಯದ ಆಸೆ ಸಹಜವಾಗಿ ಬಂದಿತು. ಬೇಲಿ ಸಡಿಲವಾಗತೊಡಗಿ ಈಗ ಪೂರಾ ಮಲಗಿಯೇ ಹೋಯಿತು. ಇಂದು ಮಹಿಳೆ ಪೂರ್ಣ ಸ್ವತಂತ್ರಳು. ಪಾಶ್ಚಾತ್ಯ ಪ್ರಭಾವ ಬೇರೆ ಸೇರಿದೆ. ವಿದ್ಯೆ, ಬುದ್ಧಿ ನೌಕರಿ ಆಡಳಿತ ಯಾವುದರಲ್ಲೂ ಆಕೆ ಹಿಂದುಳಿದಿಲ್ಲ. ಡಾಕ್ಟರು, ಇಂಜಿನಿಯರು, ಲಾಯರು, ಪೈಲಟ್, ಪ್ರೊಫೆಸರ್, ಪ್ರಿನ್ಸಿಪಾಲ್, ಫ್ಯಾಕ್ಟರಿ, ಬ್ಯಾಂಕುಗಳು ಎಲ್ಲಾ ಆಫೀಸುಗಳಲ್ಲೂ ಪುರುಷರನ್ನೂ ಮೀರಿ ಮಹಿಳೆಯರು ತುಂಬಿದ್ದಾರೆ. ಮುಖ್ಯವಾಗಿ ಇಂದು ದೇಶವನ್ನಾಳುತ್ತಿರುವವಳು ಮಹಿಳೆ !

ಇಷ್ಟೆಲ್ಲಾ ಇದ್ದಾಗ್ಯೂ 'ಇನ್ನೂ ನಮಗೆ ಪುರುಷರು ಸ್ವತಂತ್ರ ನೀಡಿಲ್ಲ. ನಮ್ಮ ಮೇಲೆ ಅವರ ದಬ್ಬಾಳಿಕೆ ಇದೆ' ಎಂಬ ಮಾತು ಕೇಳಿಬರುತ್ತಿದೆ. ಕೆಲವು ಸಂದರ್ಭಗಳಲ್ಲಿ, ಅನಿವಾರ್ಯವಾದ ಕೆಲವು ಕಾರಣಗಳಿಂದ ಪುರುಷ ಆಕೆಗೆ ಸ್ವಲ್ಪ ತಡೆಮಾಡಬಹುದು. ಅದೂ ನೂರರಲ್ಲಿ ಎರಡು ಮಂದಿಗೆ ಮಾತ್ರ ಇಂತಹ ತಡೆ ಇರಬಹುದು.

ಮತ್ತೆ ಮಹಿಳೆಯ ಅತಿ ಸ್ವಾತಂತ್ರ್ಯದಿಂದ ಕೆಲವು ವೇಳೆ ಅದೇ ಆಕೆಗೆ ಮಾರಕವಾಗುವ ಸಂಭವವೂ ಉಂಟು. ಇದನ್ನು ನಾವು ಬರಹದಲ್ಲಾಗಲೀ, ಬಾಯ-ಲ್ಲಾಗಲೀ ವ್ಯಕ್ತಪಡಿಸುವುದು ಸಮಂಜಸವಲ್ಲ. ಇಂದು ಜಗತ್ತಿನ ಜನಾಂಗವೆಲ್ಲಾ ಈ ಅತಿ ಸ್ವಾತಂತ್ರ್ಯದ ದುಷ್ಪರಿಣಾಮವನ್ನು ಕಣ್ಣಾರೆ ಕಾಣುತ್ತಿದೆ; ಪತ್ರಿಕೆಗಳಲ್ಲಿ ಓದುತ್ತಿದ್ದಾರೆ. ಇದಕ್ಕಿಂತ ಇನ್ನು ಬೇರೆ ಪ್ರಮಾಣ ಬೇಕಿಲ್ಲ.

ಮಹಿಳೆ ತನ್ನ ಸನ್ನಡತೆ, ಪ್ರೀತಿ, ವಿಶ್ವಾಸಗಳಿಂದ ತನ್ನ ಪಾಲಿನ ಸ್ವಾತಂತ್ರ್ಯವನ್ನು ಪಡೆಯಬಲ್ಲಳು. ಆ ರೀತಿ ಪುನೀತ ಸ್ವಾತಂತ್ರ್ಯ ಪಡೆದು ದೇಶಸೇವೆ, ಸಮಾಜಸೇವೆ, ಸಂಸಾರಸೇವೆಗಳ ಮೂಲಕ ಸ್ವಯಂ ಸುಖ ಪಡೆದ ಮಹಿಳೆಯರು ಇಂದು ನಮ್ಮ ಮುಂದೆ ಅನೇಕರಿದ್ದಾರೆ. ಅವರ ಜನಪ್ರಿಯತೆ ನಿರ್ಮಲವಾಗಿದೆ. ಇಂತಹ ಶಾಂತಿಸಹನೆಯ ವಿಶ್ವಸೇವಿಕೆಯರನ್ನು ಪವಿತ್ರ ಭಾವನೆಗಳಿಂದ ಮನಸಾ ಅಭಿನಂದಿಸುವ ಪುರುಷ ಜನಾಂಗವನ್ನು ನಾವಿಂದು ದಿನದಿನವೂ ಕಾಣುತ್ತಿದ್ದೇವೆ. ಆದರೆ ಈ ಶಾಂತಿ, ಸಹನೆ, ಪ್ರೀತಿ, ವಿಶ್ವಾಸಗಳಿಂದ ಸ್ವಾತಂತ್ರ್ಯಗಳಿಸುವುದು ಮಹಿಳೆಯ ಮನೋದೌರ್ಬಲ್ಯವೆಂದು ಭಾವಿಸುವ ಮಂದಿಯೂ ಇದ್ದಾರೆ.

'ಇದುವರೆಗೆ ಪುರುಷರ ದಬ್ಬಾಳಿಕೆ ಸಹಿಸಿ ಸಹಿಸಿ ನಮಗೆ ಸಾಕಾಗಿದೆ. ನಾವಿನ್ನು ಕ್ರಾಂತಿಯಿಂದಲೇ ಸ್ವಾತಂತ್ರ್ಯ ಪಡೆಯ-ಬೇಕು. ಶಾಂತಿಯಿಂದ ಯಾವ ಕೆಲಸವೂ ನಡೆಯಲಾರದು' ಎಂದು ನೊಂದು, ರೋಸಿ ರೊಚ್ಚಿಗೇಳುವ ಮಹಿಳೆಯರನ್ನು ಇಂದು ಕಾಣಬಹುದು. ಇದನ್ನು ನಾವು ಪೂರ್ಣ ತಥ್ಯ ಎನ್ನಲಾಗದು; ಕಾರಣ ಅವರವರ ವೈಯಕ್ತಿಕ ವಿಷಯಗಳಲ್ಲಿ ಅವರು ಪುರುಷರ ದಬ್ಬಾಳಿಕೆಯಿಂದ ಬಹಳ ನೊಂದಿರಬಹುದು. ಅವರ ಅರ್ಥಹಾನಿ, ಮಾನಹಾನಿಯಾದ ಪ್ರಸಂಗಗಳನ್ನು ನಾವು ಕಂಡು, ಅವರ ಸಂಕಟ ಅರಿತೂ ಈಗ ಅವರು ಸಿಡಿದೆದ್ದಿರುವುದು ತಪ್ಪೆಂದು ಹೇಳಲಾಗುವುದಿಲ್ಲ. ಇಂತಹ ನೂರಾರು ಉದಾಹರಣೆಗಳು ನಮ್ಮ ಮುಂದೆ ಇವೆ.

ಆದರೆ ಒಬ್ಬ ಮನುಷ್ಯ ಕೆಟ್ಟವನಾದರೆ ಇಡೀ ಪುರುಷ ಜನಾಂಗವನ್ನೇ ದೂಷಿಸುವುದು ಮಹಿಳೆಗೂ ತರವಲ್ಲ. ಒಬ್ಬಳು ಮಹಿಳೆ ಕೆಟ್ಟವಳಾದರೆ ಮಹಿಳಾ ಜನಾಂಗವನ್ನೇ ಅಲ್ಲಗಳೆಯುವುದು ಪುರುಷರಿಗೂ ಶೋಭಿಸುವ ಮಾತಲ್ಲ.

ಒಬ್ಬ ತಾಯಿಯ ಗರ್ಭದಲ್ಲಿ ಆರೆಂಟು ಮಕ್ಕಳು ಜನಿಸಿದರೆ ತಂದೆ-ತಾಯಿ ಎಷ್ಟೇ ಶೀಲ-ಗುಣ ಸಂಪನ್ನರಿದ್ದರೂ ಅವರ ಒಬ್ಬೊಬ್ಬ ಮಕ್ಕಳೂ ವಿಭಿನ್ನ ಗುಣ, ವಿಭಿನ್ನ ರೂಪ, ಸ್ವಭಾವದವರಾಗಿರು ತ್ತಾರೆ. ಇದಕ್ಕೆ ಕಾರಣ ಹುಡುಕಲು ಹೊರಟರೆ ನದೀಮೂಲ ಋಷಿ ಮೂಲ ಹುಡುಕಲು ಹೊರಟಂತಾ ಗುತ್ತದೆ. ಒಂದು ಮಾವಿನ ಮರದಲ್ಲಿ ಹುಳಿ, ಹುಳುಕು ಮತ್ತು ರಸಭರಿತ ಪರಿಪಕ್ವ ಫಲಗಳು ಬಿಡುತ್ತವೆ. ಹೀಚಿನಲ್ಲೇ ಉದುರಿಹೋಗುವುವು ಕೆಲವು. ಇದಕ್ಕೆ ಕಾರಣ ಯಾರು ಹೇಳಬೇಕು? ಒಂದೇ ಮರ; ಗಾಳಿ, ನೀರು, ಬೇರು, ಬಿಸಿಲು ಎಲ್ಲಾ ಒಂದೇ. ಆದರೆ ಫಲಗಳಲ್ಲಿ ಈ ವ್ಯತ್ಯಾಸವೇಕೆ?

ಹಾಗೆಯೇ ಜಗತ್ತಿನ ಜನಾಂಗದಲ್ಲೂ ಪಕ್ವ ಅಪಕ್ವ. ಜ್ಞಾನಿ, ಅಜ್ಞಾನಿಗಳಿರುವುದರಿಂದ ಈ ರೀತಿ ಭಿನ್ನ ಭೇದಗಳು ಬರುವುದು ಸಹಜ. ನಿಜವಾದ ವಿಚಾರವಾದಿಗಳು, ವಿವೇಚನಾಶಕ್ತಿಯುಳ್ಳವರು, ಅಜ್ಞಾನಿ-ಗಳು ಅದೆಷ್ಟೇ ಬಂಡಾಯವೆದ್ದರೂ ಅದು ಅವರ ತಾತ್ಕಾಲಿಕ ಉದ್ವೇಗ ಮತ್ತು ಮನೋದೌರ್ಬಲ್ಯವೆಂದು ಭಾವಿಸಿ ಅವರ ಆವೇಶ ಇಳಿಯುವವರೆಗೆ ಶಾಂತಿಯಿಂದಿದ್ದು ನಂತರ ಅವರ ತಪ್ಪು ಅವರಿಗೇ ತಿಳಿಯುವಂತೆ ಪರೋಕ್ಷ ಸಂದೇಶ ನೀಡುತ್ತಾರೆ. ಆದರೆ ಈ ಶಾಂತಿಯ ವಿಳಂಬದಿಂದ ಅನೇಕ ಬಾರಿ ಬಹಳ ಅನಾಹುತಗಳು ನಡೆದಿರುವುದೂ ಉಂಟು. ಇದು ಅನಿವಾರ್ಯ.

ಏನೇ ಆದರೂ ಸಂಸಾರವೆಂಬ ಗಾಡಿಗೆ ಕಟ್ಟಿದ ಎರಡು ಎತ್ತುಗಳು ಸ್ತ್ರೀ ಪುರುಷರು, ಎನ್ನಬಹುದು. ಈ ಗಾಡಿಗೆ ಒಂದು ಎತ್ತನ್ನೂ, ಒಂದು ಕೋಣವನ್ನೂ ಕಟ್ಟಿದರೆ ಗಾದೆಯ ಮಾತಿನಂತೆ "ಎತ್ತು ಏರಿಗೆ ಎಳೆದರೆ, ಕೋಣ ನೀರಿಗೆ ಎಳೆಯುತ್ತದೆ". ಅತ್ತ ಕೆರೆ, ಇತ್ತ ದರಿ, ಇರುವ ಏರಿಯಮೇಲೆ ಈ ಕೋಣ ಎತ್ತುಗಳ ಗಾಡಿ ಅತ್ತಿತ್ತ ಎಳೆದಾಡಿದರೆ ಗಾಡಿಯ ಗತಿಯೇನು? ಸಾರಥಿ ಮತ್ತು ಅದರಲ್ಲಿ ಕುಳಿತಿರುವವರ ಗತಿ ಏನು?

ಇಂದು ನಮ್ಮ ಇಪ್ಪತ್ತನೇ ಶತಮಾನದ ರಥ ಹೀಗೆ ಅತ್ತಿತ್ತ ಎಳೆದಾಡುತ್ತಿದೆ. ನಿಜಹೇಳಬೇಕೆಂದರೆ ಎಂಥ ಧೀರನೂ ಇಂದಿನ ಪರಿಸ್ಥಿತಿಗೆ ಪರಿಹಾರ ಸೂಚಿಸಲಾರ. ಪರಿಹಾರ ಒಂದೇ. ಇಂದು ಸ್ತ್ರೀಯರಾಗಲಿ ಪುರುಷರಾಗಲೀ ತಮ್ಮ ತಮ್ಮಲ್ಲಿಯ ಯಾದವೀ ಕಲಹವನ್ನು ಒಂದು ಬದಿಗಿಟ್ಟು, ಭವಿಷ್ಯವನ್ನು ಕುರಿತು ಚಿಂತಿಸದೆ ಧೀಮಂತತನದಿಂದ ಬಂದುದನ್ನು ಎದುರಿಸಲು ಸಿದ್ಧರಾಗಬೇಕು.

ಎಪ್ಪತ್ತೈದನೆಯ ಇಸವಿ ಮಾತ್ರ ಮಹಿಳಾ ವರ್ಷವಾಗದೆ ಇದುವರೆಗೆ ನಡೆದು ಬಂದಂತೆ ಎಲ್ಲ ವರ್ಷಗಳೂ ಸ್ತ್ರೀ ಪುರುಷರಿಗೆ ಸಮಾನ ವರ್ಷಗಳಾಗಿ ಶಾಂತಿ, ಸಹನೆ, ಔದಾರ್ಯಗಳಿಂದ ಪುರುಷ-ಮಹಿಳೆ ಹಾಲು-ಸಕ್ಕರೆ ಯಂತೆ ಹೊಂದಿ ಸಮರಸವಾಗಿ ಬಾಳಬೇಕೆಂದು ಬಯಸುವುದೇ ನಮ್ಮ ಮನದ ಆಶಯವಾಗಿದೆಯೆಂದರೆ ತಪ್ಪಾಗದು. ಈವರೆಗೆ ಪ್ರತ್ಯೇಕತೆ ಅಳಿಸಿ ಏಕತೆ ಎದ್ದು ನಿಲ್ಲಲೆಂದು ನಾವು ಮನಃಪೂರ್ವಕ ಹಾರೈಸುತ್ತೇವೆ.

—

'ಯೌವನ, ಐಶ್ವರ್ಯ, ಅಹಂಕಾರ, ಅಧಿಕಾರ - ಇವು
ಮನುಷ್ಯನ ಅವನತಿಗೆ ಒಂದೊಂದು ದಾರಿ
ಅವು ಒಟ್ಟಿಗೆ ಸೇರಿದರೆ ಮನುಷ್ಯನ ಸರ್ವನಾಶಕ್ಕೆಹೆದ್ದಾರಿ'

—ಕನ್ನಡ ಕವಿ

# ರೇಬೀಸ್

-ಎಂ. ಸತ್ಯನಾರಾಯಣರಾವ್

ಹುಚ್ಚುನಾಯಿಯನ್ನು ಕಂಡರೆ ಯಾರಿಗೆ ತಾನೇ ಭಯವಿಲ್ಲ. ಜನರು ಹಿಂದಿನ ಕಾಲದಲ್ಲಿ ಎಷ್ಟೊಂದು ಹೆದರುತ್ತಿದ್ದರೋ ಇಂದೂ ಅಷ್ಟೇ ಹೆದರುತ್ತಿದ್ದಾರೆ ಎಂದರೆ ಉತ್ಪ್ರೇಕ್ಷೆಯೇನಿಲ್ಲ. ನಾಯಿಯಲ್ಲಿರುವ ಹುಚ್ಚುರೋಗ ಅಥವಾ ರೇಬೀಸ್ ಆ ಪ್ರಾಣಿ ಜಾತಿಯೊಂದಕ್ಕೆ ಮಾತ್ರವೇ ಸೀಮಿತವಾಗಿದ್ದಲ್ಲಿ ಜನರು ಇಷ್ಟೊಂದು ಹೆದರುವ ಅವಶ್ಯಕತೆ ಇರಲಿಲ್ಲವೇನೋ! ಆದರೆ ನಾಯಿಯಿಂದ ಮನುಷ್ಯರಿಗೂ ಮತ್ತು ಇತರ ಸಾಕು ಪ್ರಾಣಿಗಳಿಗೂ ಹರಡುವ ಅತಿ ಭಯಾನಕ ಸೋಂಕು ರೋಗವಾದ ಇದು ಪ್ರತಿಯೊಬ್ಬರ ಪ್ರಾಣ ಭಯಕ್ಕೆ ಕಾರಣವಾಗಿದೆ. ದಿನಪತ್ರಿಕೆಗಳ ವಾಚಕರವಾಣಿ, ಜನ–ಮನ ಕಾಲಂಗಳಲ್ಲಿ "ಬೀದಿ ನಾಯಿಗಳು ಮತ್ತು ರೇಬೀಸ್" ಎಂಬ ವಿಷಯದ ಬಗ್ಗೆ ಬರೆದಿರುವ ವಾಚಕರ ಪತ್ರಗಳು ಎಲ್ಲರ ಗಮನವನ್ನು ಸೆಳೆಯುವಂತಹವು.

ಬೀದಿ ನಾಯಿಗಳ ನಿರ್ನಾಮ ಕ್ರಮಗಳಿಲ್ಲದ ಮತ್ತು ಪ್ರಾಣಿಗಳಲ್ಲಿ ಸರಿಯಾದ ಹಾಗೂ ಸಕ್ರಮವಾದ ರೇಬೀಸ್ ಸೋಂಕು ನಿವಾರಣಾ ಕ್ರಮಗಳು ಅನುಷ್ಠಾನದಲ್ಲಿಲ್ಲದ ನಮ್ಮ ದೇಶದಲ್ಲಿ ಜನರ ಹಾಗೂ ಪ್ರಾಣಿಗಳ ಹಿತದೃಷ್ಟಿಯಿಂದ ರೇಬೀಸ್ ರೋಗವು ಬಹಳ ಮುಖ್ಯವಾದುದಾಗಿದೆ. ರೇಬೀಸ್ ರೋಗದಿಂದಾಗಿ ನಮ್ಮ ದೇಶದಲ್ಲಿ ಪ್ರತಿ ವರ್ಷ 15,000 ಮಂದಿ ಸಾಯುತ್ತಿದ್ದಾರೆಂದು ದೊರೆತ ಅಂಕಿ ಅಂಶಗಳು ತಿಳಿಸುತ್ತವೆ. ಇದಲ್ಲದೆ ಲೆಕ್ಕಕ್ಕೆ ಸಿಗದೆಹೋದ ವಿದ್ಯಮಾನಗಳು ಅದೆಷ್ಟೋ! ಪ್ರತಿ ವರ್ಷ ಮೂವತ್ತು ಲಕ್ಷಕ್ಕಿಂತಲೂ ಹೆಚ್ಚುಮಂದಿ ರೇಬೀಸಿನ ಪ್ರತಿಶೋಧಕ (Anti-Rabic treatment) ಪಡೆಯುತ್ತಿದ್ದಾರೆ. ಇದರಿಂದಾಗಿಯೇ ಪ್ರತಿವರ್ಷ ಜನರ 42,00,000 ಕೆಲಸದ ದಿನಗಳು ವ್ಯರ್ಥವಾಗುತ್ತಿದ್ದು ಒಟ್ಟು ಇಪ್ಪತ್ತಾರು ಲಕ್ಷಕ್ಕಿಂತಲೂ ಹೆಚ್ಚು ಹಣ ನಷ್ಟವಾಗುತ್ತಿದೆ. ವ್ಯಾಕ್ಸಿನ್ ತಯಾರಿಕೆಗಾಗಿಯೇ ಪ್ರತಿ ವರ್ಷ ಐವತ್ತು ಲಕ್ಷ ರೂ. ವ್ಯಯಮಾಡಲಾಗುತ್ತಿದೆ. ವಿವಿಧ ಪ್ರಾಣಿಗಳಲ್ಲಿ ರೇಬೀಸ್ ರೋಗದ ಸಂಭವಗಳ ಹಾಗೂ ಅದರಿಂದಾಗಿ ಸಂಭವಿಸುತ್ತಿದ್ದ ನಷ್ಟದ ಬಗ್ಗೆ ಗಣನೆಯಿಟ್ಟಿಲ್ಲ. ಇದರ ಬಗ್ಗೆ ಸಾಕಷ್ಟು ವರದಿಗಳು ದೊರೆಯದಿರುವುದೇ ಇದಕ್ಕೆ ಕಾರಣ.

ಪ್ರಾಣಿಗಳಿಂದ ಮನುಷ್ಯನಿಗೆ ಹರಡುವ ಬಹು ಮುಖ್ಯ ಹಾಗೂ ಭಯಾನಕ ರೋಗವಾದ ನಾಯಿ ಹುಚ್ಚಿನ ಪರಿಚಯ ಬಹಳ ಪುರಾತನ ಕಾಲದಿಂದಲೂ ಇದೆ. ಅರಿಸ್ಟಾಟಲ್ ಮತ್ತು ಡೆಮಾಕ್ರಿಟಸ್ ಎಂಬುವರು ಕ್ರಮವಾಗಿ ಮೂರು ಮತ್ತು ಐದನೆಯ ಶತಮಾನದಲ್ಲಿಯೇ ಪ್ರಾಣಿಗಳಲ್ಲಿನ ನಾಯಿ ಹುಚ್ಚನ್ನು ವರ್ಣಿಸಿದ್ದಾರೆ. ಸೆಲ್ಲಸ್ ಎಂಬ ವಿಜ್ಞಾನಿ ಕ್ರಿ. ಶ. 100 ರಲ್ಲಿಯೇ ನಾಯಿ ಹುಚ್ಚು, ಹುಚ್ಚು ನಾಯಿಗಳ ಕಡಿತದಿಂದ ಹರಡುವುದೆಂಬುದನ್ನು ಸೂಚಿಸಿದ್ದಾನೆ.

'ನಾಯಿ ಹುಚ್ಚು' ಅಥವಾ 'ಹುಚ್ಚುನಾಯಿ ಕಡಿತ' ಎಂಬ ಪದಗಳು ರೂಢಿಯಲ್ಲಿದ್ದರೂ ವೈಜ್ಞಾನಿಕ ಪರಿಭಾಷೆಯಲ್ಲಿ 'ರೇಬೀಸ್' ಎಂಬ ಹೆಸರು ಪ್ರಚಾರದಲ್ಲಿದೆ. ಇದು ರೇಬೀಸ್ ಎನ್ನುವ ವಿಷಾಣುಗಳಿಂದ ಬರುವ ಒಂದು ಸೋಂಕುರೋಗ. ರೇಬೀಸ್ ರೋಗವು ಎಲ್ಲತರದ ಬಿಸಿರಕ್ತ ಪ್ರಾಣಿಗಳಲ್ಲಿ ಕಂಡುಬಂದರೂ ಪ್ರಾಥಮಿಕವಾಗಿ ಇದು ನಾಯಿ, ಬೆಕ್ಕು ಮತ್ತು ಕೆಲವು ವನ್ಯ ಪ್ರಾಣಿಗಳ ರೋಗ. ಇವುಗಳಿಂದ ದನ, ಎಮ್ಮೆ, ಕುರಿ, ಕುದುರೆ ಮುಂತಾದ ಇತರೇ ಸಾಕುಪ್ರಾಣಿಗಳಿಗೂ ಹರಡುವುದು. ಸಾಕು ಪ್ರಾಣಿಗಳಲ್ಲಿ ನಾಯಿಗಳನ್ನು ಬಿಟ್ಟರೆ ಅನಂತರದ ಹೆಚ್ಚಿನ ರೋಗ ಗ್ರಾಹಕ ಪ್ರಾಣಿಗಳೆಂದರೆ ದನಗಳು.

ಮನುಷ್ಯನು ರೇಬೀಸ್ ರೋಗದ ಬಾಧಿತ ಯಾವ ಪ್ರಾಣಿಯಿಂದಲಾದರೂ ರೋಗವನ್ನು ಪಡೆಯಬಹುದು. ಸಾಕುಪ್ರಾಣಿಗಳಲ್ಲಿ ನಾಯಿಯನ್ನು ಸೇರಿಸಿಕೊಂಡಂತೆ ದನ, ಎಮ್ಮೆ, ಕುರಿ, ಕುದುರೆ, ಬೆಕ್ಕು ಮುಂತಾದವುಗಳೂ ಕಾಡುಪ್ರಾಣಿಗಳಾದ ನರಿ, ತೋಳ ಮುಂತಾದವುಗಳೂ ಮತ್ತು ಬಾವಲಿಗಳೂ, ಮನುಷ್ಯನಿಗೆ ರೇಬೀಸ್ ರೋಗವನ್ನು ಹರಡುತ್ತವೆ. ಆದರೆ ಜನರು ನಾಯಿಯಿಂದ ರೇಬೀಸ್ ರೋಗವನ್ನು ಪಡೆಯುವ ಸಂಭವಗಳೇ ಹೆಚ್ಚು. ಮನುಷ್ಯನ ರೇಬೀಸ್ ರೋಗಕ್ಕೆ ಬೀದಿ ನಾಯಿಗಳು ಅಥವಾ ಸಾಕುನಾಯಿಗಳೇ ಮುಖ್ಯ ಕಾರಣವಾಗಿರುತ್ತವೆ. ಬೀದಿ ನಾಯಿಗಳಿಗೆ ಕೊರತೆಯಿಲ್ಲದ ನಮ್ಮ ದೇಶದಲ್ಲಿ ರೇಬೀಸ್ ರೋಗಕ್ಕೆ ಬರಗಾಲವಿಲ್ಲವೆನ್ನಬಹುದು. ಜನರ ಒಟ್ಟು ರೇಬೀಸ್ ವಿದ್ಯಮಾನಗಳಲ್ಲಿ, ಶೇ. 90 ರಷ್ಟು ನಾಯಿಗಳ ಕಡಿತದಿಂದಲೂ ಇನ್ನುಳಿದವು ನರಿ, ತೋಳ, ಬೆಕ್ಕು ಮುಂತಾದವುಗಳ ಕಡಿತದಿಂದಲೂ ಹರಡಿದವು ಎಂದು ಅಂದಾಜು ಮಾಡಲಾಗಿದೆ.

**ರೇಬೀಸ್ ಸೋಂಕು ಹರಡುವ ಬಗೆ :**

ಹುಚ್ಚುನಾಯಿಗಳು ಸಾಮಾನ್ಯವಾಗಿ ಕಂಡದ್ದನ್ನೆಲ್ಲಾ ಕಡಿಯುವುದು ಸ್ವಾಭಾವಿಕ. ಇವು ಮನುಷ್ಯರನ್ನೂ, ಇತರ ಪ್ರಾಣಿಗಳನ್ನೂ ಕಚ್ಚುತ್ತಾ ಹೋಗುತ್ತವೆ. ಹುಚ್ಚುನಾಯಿಗಳ ಜೊಲ್ಲಿನಲ್ಲಿ ವಿಸರ್ಜಿತವಾಗುತ್ತಿರುವ ರೇಬೀಸ್ ವಿಷಾಣುಗಳು ಕಡಿತ ಗಾಯಗಳ ಮೂಲಕ ಶರೀರವನ್ನು ಪ್ರವೇಶಿಸುತ್ತವೆ. ವಿಷಾಣು ಭರಿತ ಜೊಲ್ಲು ಚರ್ಮದ ಗಾಯಗಳ ಮೂಲಕ ಶರೀರವನ್ನು ಪ್ರವೇಶಿಸುತ್ತದೆ. ವಿಷಾಣುಭರಿತ ಜೊಲ್ಲು ಚರ್ಮದ ಒಳಗೆ ಪ್ರವೇಶಿಸಿದಲ್ಲದೆ ಸೋಂಕು ಸ್ಥಾಪನೆಯಾಗದು. ರೋಗದ ಲಕ್ಷಣಗಳು ಪ್ರಕಟವಾಗುವುದಕ್ಕೆ 3–4 ದಿನಗಳ ಮುಂಚೆಯೇ ಹುಚ್ಚುನಾಯಿಗಳ ಜೊಲ್ಲಿನಲ್ಲಿ ರೇಬೀಸ್ ವಿಷಾಣುಗಳ ವಿಸರ್ಜನೆಯಾಗುತ್ತಿರುವುದೆಂದು ಪ್ರಾತ್ಯಕ್ಷರೀತ್ಯ ತಿಳಿಯಲಾಗಿದೆ. ಕೆಲವು ನಾಯಿಗಳು ರೋಗದ ಯಾವ ರೀತಿಯ ಲಕ್ಷಣಗಳನ್ನೂ ತೋರಿಸದೆ ಬಾಹ್ಯತಃ ಚರ್ಯೆಯಲ್ಲಿ ಆರೋಗ್ಯದಿಂದಿರುವಂತೆ ಕಂಡುಬಂದರೂ ಅವುಗಳ ಜೊಲ್ಲಿನಲ್ಲಿ ರೇಬೀಸ್ ವಿಷಾಣುಗಳ ವಿಸರ್ಜನೆಯಾಗುತ್ತಿದ್ದು, ಅವು ಸೋಂಕುವಾಹಕಗಳಾಗಿ ಮಹಾನಮಾಗಿಯೇ ಸೋಂಕು ಪ್ರಸಾರ ಮಾಡುವುದುಂಟು. ಅಂತಹ ನಾಯಿಗಳ ಕಡಿತದಿಂದಲೂ ಮತ್ತು ಆ ನಾಯಿಗಳ ಬಾಯಲ್ಲಿ ಗಾಯಗಳ ಕೈಯಿಡುವುದರಿಂದಲೂ ಜನರು ರೇಬೀಸ್ ರೋಗವನ್ನು ಪಡೆಯುವುದುಂಟು. ಇದಕ್ಕಿದೆ ಪಶುವೈದ್ಯಶಾಲೆಗೆ ಚಿಕಿತ್ಸೆಗಾಗಿ ಬರುವ ಪ್ರಾಣಿಗಳ ಚಿಕಿತ್ಸೆಯಲ್ಲಿ ತೊಡಗುವ ಪಶುವೈದ್ಯರು, ಆಸ್ಪತ್ರೆಯ ಇತರೇ ಸಿಬ್ಬಂದಿಯೂ ಮತ್ತು ಪ್ರಾಣಿಗಳ ಮಾಲೀಕರೂ ಪ್ರಾಣಿಗಳಿಂದ ರೇಬೀಸ್ ರೋಗವನ್ನು ಪಡೆಯಬಹುದು.

**ಹುಚ್ಚುನಾಯಿಯ ಕಡಿತ ಮತ್ತು ಅದರ ಪರಿಣಾಮ :**

ರೇಬೀಸ್ ವಿಷಾಣುಗಳಿಗೂ ನರಗಳಿಗೂ ಮೈತ್ರಿ ಹೆಚ್ಚು. ಹುಚ್ಚುನಾಯಿಗಳು ಜನರನ್ನು ಕಡಿದಾಗ ಅವುಗಳ ಜೊಲ್ಲಿನಲ್ಲಿರುವ ರೇಬೀಸ್ ವಿಷಾಣುಗಳು ಕಡಿತ ಗಾಯಗಳ ಮೂಲಕ ಶರೀರವನ್ನು ಪ್ರವೇಶಿಸಿ ನರಗಳಲ್ಲಿ ಅಥವಾ ನರಗಳ ಸಮೀಪದಲ್ಲಿ ಕೇಂದ್ರಿತವಾಗಿ ಸೋಂಕು ಸ್ಥಾಪನೆಯಾಗುವುದು. ಸೋಂಕು ಸ್ಥಾಪನೆ ಮುಖ್ಯವಾಗಿ ಹುಚ್ಚುನಾಯಿ ಮನುಷ್ಯನ ಶರೀರದ ಯಾವ ಭಾಗದಲ್ಲಿ ಕಚ್ಚುತ್ತದೆ ಎಂಬುದರ ಮೇಲೆ ಅವಲಂಬಿಸಿರುತ್ತದೆ. ತಲೆ, ಕತ್ತು ಮತ್ತು ಮುಖದ ಮೇಲಾಗುವ ಕಡಿತ ಗಾಯಗಳು ಹೆಚ್ಚು ಅಪಾಯಕರ. ಇದರ ನಂತರ ಕೈಕಾಲುಗಳ ಮೇಲಾಗುವ ಕಡಿತ ಗಾಯಗಳೂ ಕೊನೆಯದಾಗಿ ಮುಂಡ ಭಾಗದ ಮೇಲಾಗುವ ಕಡಿತ ಗಾಯಗಳೂ ಅಪಾಯಕರವಾಗಿರುತ್ತವೆ. ರೋಗಿಯಲ್ಲಿನ ರೋಗಪರಿಪಕ್ವಾವಧಿ ಆತನ ಶರೀರದ ಮೇಲಾಗುವ ಗಾಯ ಮತ್ತು ಅದರ ಮೂಲಕ ವಿಷಾಣುಗಳ ಪ್ರವೇಶ ಇವೆರಡು ಅಂಶಗಳ ಮೇಲೆ ಅವಲಂಬಿಸಿರುತ್ತದೆ. ತಲೆ, ಮುಖ, ಕತ್ತು ಈ ಭಾಗಗಳಲ್ಲಿ ಹುಚ್ಚುನಾಯಿಗಳು ಕಚ್ಚಿದಲ್ಲಿ ರೋಗ ಪರಿಪಕ್ವಾವಧಿ ಬಹಳ ಕಡಿಮೆ ಇದ್ದು ಆ ವ್ಯಕ್ತಿ ಬಹು ಬೇಗ ಸಾವನ್ನಪ್ಪುವನು. ಹುಚ್ಚುನಾಯಿಗಳು ಜನರನ್ನು ಕಚ್ಚಿದಾಗ ಅವರಲ್ಲಿ ರೋಗ ಸ್ಥಾಪನೆಯಾಗಲು ಪ್ರಭಾವಿಸುವ ಅಂಶಗಳೆಂದರೆ 1) ಕಡಿಯುವ ಸೋಂಕು

ಪ್ರಾಣಿಗಳ ಜೊಲ್ಲಿನಲ್ಲಿರುವ ವಿಷಾಣುಗಳು ಜವುಗಳ ಪರಿಮಾಣ 2) ಕಡಿತದ ಬಿರುಸು 3) ಶರೀರ ವನ್ನು ಮುಚ್ಚಿರುವ ಬಟ್ಟೆ. ರೋಗಿಪ್ರಾಣಿಗಳ ಜೊಲ್ಲಿನಲ್ಲಿ ರೇಬೀಸ್ ವಿಷಾಣುಗಳು ಅಧಿಕ ಪರಿಮಾಣದಲ್ಲಿದ್ದಾಗಲೂ, ಕಡಿತದ ಬಿರುಸು ಹೆಚ್ಚಾಗಿಯೂ, ಆಳವಾಗಿಯೂ ಇದ್ದಾಗಲೂ ಮತ್ತು ಬಟ್ಟೆ ಮುಚ್ಚದಿರುವ ಶರೀರದ ಭಾಗಗಳಲ್ಲಿ ಪ್ರಾಣಿಗಳು ಕಚ್ಚಿದಾಗಲೂ ಸುಲಭವಾಗಿ ರೋಗ ಸ್ಥಾಪನೆಯಾಗುವುದು. ಶರೀರವನ್ನು ಮುಚ್ಚಿರುವ ಬಟ್ಟೆ ದಪ್ಪವಾಗಿದ್ದಷ್ಟೂ ಜೊಲ್ಲು ಶರೀರವನ್ನು ಪ್ರವೇಶಿಸದಂತೆ ಅದು ತಡೆಯುವುದು.

ಗಾಯಗಳಿಂದ ವಿಷಾಣುಗಳು ನರಗಳ ಮೂಲಕ ಹಾಯ್ದು ಬೆನ್ನು ಹುರಿಯನ್ನು [Spinal Cord] ತಲುಪುತ್ತವೆ. ನಂತರ ವಿಷಾಣುಗಳು ಬೆನ್ನುಹುರಿಯಲ್ಲಿ ಮೇಲ್ಮುಖವಾಗಿ ಸಾಗಿ ಕೊನೆಗೆ ಮಿದುಳನ್ನು ಮುಟ್ಟುತವೆ. ಇದಕ್ಕೆ ಸಾಕಷ್ಟು ಕಾಲಾವಕಾಶ ಹಿಡಿಯುತ್ತದೆ. ಮಿದುಳನ್ನು ಪ್ರವೇಶಿಸಿದ ನಂತರ ವಿಷಾಣುಗಳು ಮಿದುಳಿನ ಜೀವಕೋಶಗಳನ್ನು ನಾಶಪಡಿಸುತ್ತವೆ. ಅದರ ಪರಿಣಾಮವಾಗಿ ಹುಚ್ಚಿನ ಚಿಹ್ನೆಗಳು ಕಾಣಿಸಿಕೊಳ್ಳುತ್ತವೆ. ಈ ಸಮಯದಲ್ಲಿ ವಿಷಾಣುಗಳು ಕೇಂದ್ರ ನರ ಮಂಡಲದಿಂದ ಹೊರಹೊಮ್ಮಿ ನರಗಳ ಮೂಲಕ ಇತರ ಅಂಗಾಂಗಗಳನ್ನು, ಮುಖ್ಯವಾಗಿ ಲಾಲಾರಸ ಗ್ರಂಥಿಗಳನ್ನು, ತಲುಪುತ್ತವೆ

ರೋಗ ನಿಯಂತ್ರಣ :

ರೇಬೀಸ್ ರೋಗನಿಯಂತ್ರಣೆಯನ್ನು ಮುಖ್ಯವಾಗಿ ಎರಡು ರೀತಿಯಲ್ಲಿ ಸಾಧಿಸಬಹುದು. 1] ಸ್ಥಳಿಕ ಗಾಯಗಳ ಚಿಕಿತ್ಸೆ 2] ರೋಗನಿರ್ಮೂಲನೆ. ಹುಚ್ಚು ನಾಯಿ ಅಥವಾ ಇತರೆ ಯಾವುದೇ ಸಂಶಯಾತ್ಮಕ ನಾಯಿ ಕಡಿದ ತಕ್ಷಣ ಜನರು ವೈದ್ಯಾಧಿಕಾರಿಗಳನ್ನು ಕಂಡು ಅವರಿಂದ ಚಿಕಿತ್ಸೆ ಪಡೆಯುವುದು ಅವಶ್ಯಕ. ನಾಯಿಯಿಂದ ಕಡಿಸಿಕೊಂಡವನು ಮಾತ್ರ ಆಸ್ಪತ್ರೆಯಲ್ಲಿ ಗಾಯಗಳ ಚಿಕಿತ್ಸೆ ಮತ್ತು ವ್ಯಾಕ್ಸಿನೇಷನ್ ಪಡೆಯುವುದೇ ಅಲ್ಲದೆ, ರೋಗಿಪ್ರಾಣಿಗಳ ಸಂಪರ್ಕ ಹೊಂದಿರುವವರೂ ಮುಂಜಾಗ್ರತಾಕ್ರಮವಾಗಿ ರೋಗ ನಿರೋಧಕ ವ್ಯಾಕ್ಸಿನೇಷನ್ ಪಡೆಯಬೇಕು. ಒಮ್ಮೆ ರೋಗಲಕ್ಷಣಗಳು ಬೇರೂರಿದ ಮೇಲೆ ರೇಬೀಸಿನ ಚಿಕಿತ್ಸೆ ನಿಷ್ಪ್ರಯೋಜಕ. ಆದ್ದರಿಂದ ಹುಚ್ಚುಹಿಡಿದ ಅಥವಾ ಹುಚ್ಚು ಹಿಡಿದವು ಎಂದು ಕಂಡುಬಂದ ಪ್ರಾಣಿಗಳಿಂದಾಗುವ ಕಡಿತಗಾಯಗಳನ್ನು ಸೋಪು ಅಥವಾ ಶುದ್ಧಿಕಾರಕ ದ್ರಾವಕಗಳಿಂದ ಆದಷ್ಟು ಬೇಗ ತೊಳೆಯಬೇಕು. ಸೋಪಿನಿಂದ ತೊಳೆಯಲಾಗದ ಆಳವಾದ, ಕಿರಿದಾದ ಮತ್ತು ರಂಧ್ರಾಕೃತಿಯಲ್ಲಿರುವ ಗಾಯಗಳನ್ನು ನೈಟ್ರಿಕ್ ಆಮ್ಲ ಮುಂತಾದ ಪ್ರಬಲ ಖನಿಜಾಮ್ಲಗಳಿಂದ (Strong mineral acids) ತೊಳೆಯುವುದು ಒಳ್ಳೆಯದು. ಗಾಯದ ಒಳಗೂ ಮತ್ತು ಅದರ ಸುತ್ತಲೂ ಅತಿರಕ್ಷರಕ್ತ ಸಾರ (Hyper Immune Serum) ಸೂಸಣೆ ರೇಬೀಸ್ ರೋಗದ ಒಂದು ಪರಿಣಾಮಕಾರಿ ಚಿಕಿತ್ಸೆ.] ಹುಚ್ಚುನಾಯಿಯಿಂದಾಗುವ ಕಡಿತಗಾಯಗಳನ್ನು ಕಾದ ಕಬ್ಬಿಣ ಸಲಾಕೆಯಿಂದ ಸುಡುವುದು ಹಳೆಯ ಪದ್ಧತಿ. ಇದು ಅಮಾನುಷ ಕಾರ್ಯವೆನಿಸಿದರೂ, ಸುಲಭ ಹಾಗೂ ತಕ್ಷಣ ಗುಣಕಾರಿ ಎನ್ನಬಹುದು.

ರೋಗ ನಿರ್ಮೂಲನೆ:

ಜನರ ರೇಬೀಸ್ ರೋಗದ ಮುಖ್ಯ ಮೂಲ ಪ್ರಾಣಿಗಳು. ಆದ್ದರಿಂದ ಪ್ರಾಣಿಗಳಲ್ಲಿನ ರೋಗವನ್ನು ನಿರ್ಮೂಲನಗೊಳಿಸಿದಲ್ಲದೆ, ಮತ್ತು ರೋಗವಾಹಕ ಪ್ರಾಣಿಗಳನ್ನು ನಾಶಪಡಿಸಿದಲ್ಲದೆ ಜನರನ್ನು ರೇಬೀಸ್ ರೋಗದಿಂದ ವಿಮುಕ್ತಿಗೊಳಿಸುವುದು ಸಾಧ್ಯವಿಲ್ಲ. ಅದರಲ್ಲೂ ಜನರಲ್ಲಿ ಮತ್ತು ಇತರ ಸಾಕು ಪ್ರಾಣಿಗಳಲ್ಲಿ ರೇಬೀಸ್ ರೋಗ ಪ್ರಸಾರವಾಗಲು ನಾಯಿಗಳೇ ಕಾರಣ ಎಂಬುದು ನಿರ್ವಿವಾದ ಸಂಗತಿ. ಆದ್ದರಿಂದ ರೇಬೀಸ್ ರೋಗವನ್ನು ನಿಯಂತ್ರಿಸುವುದಕ್ಕಾಗಿ ಯಾವುದೇ ಯೋಜನೆಯನ್ನು ರಚಿಸಲಿ ಅದರ ಮುಖ್ಯ ಕೆಲಸ—ಬೀದಿ ನಾಯಿಗಳನ್ನು ನಿರ್ನಾಮ ಮಾಡುವುದು, ಮನೆಯಲ್ಲಿನ ಎಲ್ಲ ಸಾಕು ನಾಯಿಗಳಿಗೂ ವ್ಯಾಕ್ಸಿನೇಷನ್ [ಆಂಟಿರೇಬಿಸ್] ಮಾಡಿಸುವುದೂ—ಇವೇ ಆಗಿರಬೇಕು. ಪ್ರಗತಿ ಪರ ದೇಶಗಳಲ್ಲಿ ರೇಬೀಸ್

ಪತೋಟಿಯ ಯೋಜನೆಗಳು ಅಸ್ತಿತ್ವದಲ್ಲಿದ್ದು ಸಾಕಷ್ಟು ಯಶಸ್ವಿಯಾಗಿ ಕಾರ್ಯಗತವಾಗುತ್ತಿವೆ. ನಮ್ಮ ದೇಶದಲ್ಲೂ ಅಂತಹವೇ ಯೋಜನೆಗಳ ಅಗತ್ಯವಿದೆ. ಮುಕ್ತೇಶ್ವರದಲ್ಲಿ [ಉತ್ತರ ಪ್ರದೇಶ] ಪಶುವೈದ್ಯಕೀಯ ಜನಾರೋಗ್ಯದ ಅಂಗವಾಗಿ 1970 ರಲ್ಲಿ ನಡೆದ ಪ್ರಾದೇಶಿಕ ಶಿಕ್ಷಣ ಗೋಷ್ಠಿಯಲ್ಲಿ ಪ್ರಾಣಿಗಳಿಂದ ಮನುಷ್ಯನಿಗೆ ಹರಡುವ ರೇಬೀಸಿನ ಬಗ್ಗೆ ಚರ್ಚೆ ನಡೆದು ಅದರ ನಿವಾರಣೆಗೆ ರೇಬೀಸ್ ಪತೋಟಿ ಸಮಿತಿಯ ನಿರೂಪಣೆಯ ಮೇರೆಗೆ ಆಯಾ ರಾಜ್ಯಗಳಲ್ಲಿ ಸ್ಥಳೀಕ ಸಲಹಾ ಯೋಜನೆಯೊಂದನ್ನು ಸ್ಥಾಪಿಸಲು ಸೂಚಿಸಲಾಯಿತು. ರೇಬೀಸ್ ರೋಗದ ನಿಯಂತ್ರಣೆಗೆ ಸಂಬಂಧಿಸಿದ ಎಲ್ಲಾ ಕ್ರಮಗಳನ್ನು ನಿರೂಪಿಸುವುದು, ಸುಸಂಘಟಿಸುವುದು, ರೇಬೀಸ್ ವಿದ್ಯಮಾನಗಳ ಹಾಗೂ ರೇಬೀಸ್ ರೋಗ ನಿಯಂತ್ರಣ ಕಾರ್ಯಗಳ ಮೇಲ್ವಿಚಾರಣೆ ನಡೆಸುವುದು ಮತ್ತು ಎಲ್ಲಾ ಕಾರ್ಯಕಲಾಪಗಳನ್ನೂ ಕಾರ್ಯರೂಪಕ್ಕೆ ತರುವುದು—ಇವೇ ಈ ಸಲಹಾ ಯೋಜನೆಯ ಮುಖ್ಯ ಕೆಲಸಗಳು

ರೇಬೀಸ್ ರೋಗ ನಿರ್ಮೂಲನಾ ಕ್ರಮಗಳು:

1. ಮನೆಯಲ್ಲಿನ ಎಲ್ಲಾ ಸಾಕು ನಾಯಿಗಳ ದಾಖಲೆ ಮತ್ತು ಅವುಗಳ ವ್ಯಾಕ್ಸಿನೇಷನ್ ಕ್ರಮಗಳು: ಎಲ್ಲಾ ಸಾಕುನಾಯಿಗಳನ್ನೂ ದಾಖಲೆ ಮಾಡಿಸಬೇಕು. ನಾಯಿಯ ಮಾಲೀಕರೆಲ್ಲರಿಗೂ ಅವರವರ ನಾಯಿಗಳ ಅಂಕೆ, ವಯಸ್ಸು, ಲಿಂಗ, ಜಾತಿ ಬಣ್ಣ, ಮತ್ತಿತರ ಗುರುತಿನ ಚೀಟಿಯನ್ನು ನೀಡಬೇಕು. ದಾಖಲೆ ಮಾಡಲ್ಪಟ್ಟ ಎಲ್ಲಾ ನಾಯಿಗಳಿಗೂ ಸೂಕ್ತ ರೋಗನಿರೋಧಕ ವ್ಯಾಕ್ಸಿನೇಷನ್ ಅನ್ನು ಆಗಾಗ್ಗೆ ಮಾಡಿಸಬೇಕು.

2. ಬೀದಿನಾಯಿಗಳ ನಾಶಕ್ರಮಗಳು: ಎಲ್ಲಾ ಬೀದಿನಾಯಿಗಳನ್ನೂ ಹಿಡಿದು ದೊಡ್ಡಿಯೊಂದರಲ್ಲಿ ಕೂಡಿಹಾಕಿ ಅವುಗಳನ್ನು ಮಾನವಿಕ ರೀತಿಯಲ್ಲಿ ಸಾಯಿಸಬೇಕು.

3. ರೋಗಪ್ರಸಾರ ನಿಯಂತ್ರಣೆ: ಯಾವುದೇ ಪ್ರದೇಶ ಅಥವಾ ಸ್ಥಳದಲ್ಲಿ ರೇಬೀಸಿನ ಹೊಸದೊಂದು ವಿದ್ಯಮಾನವು ಕಂಡುಬಂದಾಗ ಅದು ತಕ್ಷಣ ಸ್ಥಳೀಕ ಸಲಹಾಯೋಜನೆಗೆ ತಿಳಿಯುವಂತಾಗಬೇಕು. ಹುಚ್ಚುನಾಯಿಗಳನ್ನೂ, ಅವುಗಳು ಕಚ್ಚಿದ ಇತರ ನಾಯಿಗಳನ್ನೂ ಕೂಡಲೇ ಸಾಯಿಸಬೇಕು. ಒಂದು ವೇಳೆ ಮಾಲೀಕರು ಹುಚ್ಚುನಾಯಿಯಿಂದ ಅಥವಾ ಸಂಶಯಾತ್ಮಕ ನಾಯಿಯಿಂದ ಕಡಿಯಲ್ಪಟ್ಟ ತಮ್ಮ ನಾಯಿಗಳನ್ನು ಸಾಯಿಸಲು ಒಪ್ಪದಿದ್ದರೆ ತಕ್ಷಣವೇ ಅವುಗಳನ್ನು ಪಶುವೈದ್ಯಶಾಲೆಗೆ ಸೇರಿಸಿ, ಚಿಕಿತ್ಸೆ ಕೊಡಿಸುವುದು ಮಾತ್ರವೇ ಅಲ್ಲದೆ, ಆರು ತಿಂಗಳವರೆಗೆ ಆಸ್ಪತ್ರೆಯಲ್ಲಿಯೇ ಪ್ರತ್ಯೇಕವಾದ ಕೋಣೆಯಲ್ಲಿಟ್ಟು ಗಮನಿಸಬೇಕು. ಇದರಿಂದಾಗಿ ರೇಬೀಸ್ ರೋಗ ಪ್ರಸಾರವಾಗುವುದನ್ನು ತಡೆಯಬಹುದು.

4. ಪ್ರತಿಯೊಂದು ರಾಜ್ಯದಲ್ಲೂ ರೋಗನಿರ್ಣಯ ಕೇಂದ್ರಗಳ ಅನುಕೂಲತೆಗಳು, ಅಧಿಕ ಪ್ರಮಾಣದಲ್ಲಿ ಸೂಕ್ತ ವ್ಯಾಕ್ಸೀನ್ ತಯಾರಿಕೆಗೆ ಅನುಕೂಲಗಳು ಮತ್ತು ಆಸ್ಪತ್ರೆಗಳಲ್ಲಿ ಅವುಗಳ ಲಭ್ಯತೆಗೆ ಅವಕಾಶವಿರಬೇಕು.

5. ಜನ ಜಾಗೃತಿಕ ಶಿಕ್ಷಣ: ರೇಬೀಸ್ ರೋಗ ನಿಯಂತ್ರಣಾ ಕಾರ್ಯವು ಯಶಸ್ವಿಯಾಗಬೇಕಾದರೆ ಸಾರ್ವಜನಿಕರ ಹೃತ್ಪೂರ್ವ ಸಹಕಾರ, ಉತ್ತೇಜನ ಮತ್ತು ಸಹಾಯ ಅವಶ್ಯಕ. ಅದಕ್ಕಾಗಿ ಅವರಿಗೆ ರೇಬೀಸ್ ರೋಗದ ಬಗ್ಗೆ ಪ್ರಚಾರ ಶಿಕ್ಷಣ ಅವಶ್ಯಕ. ಈ ಶಿಕ್ಷಣವನ್ನು ಅಲ್ಲಲ್ಲಿ ಶಿಕ್ಷಣ ಕೇಂದ್ರಗಳಲ್ಲೂ ರೇಡಿಯೋ, ಪತ್ರಿಕೆ, ಮತ್ತು ಡಾಕ್ಯುಮೆಂಟರಿ ಫಿಲಂಗಳ ಮೂಲಕವೂ ವ್ಯಾಪಕ ರೀತಿಯಲ್ಲಿ ಕೊಡಬೇಕು.



## ಭುವಿಗಿಳಿದ ಶಿವತಾನು ಇವರಿಗೊಲಿದು

[22 ನೇ ಪುಟದಿಂದ]

ಕಾಲ್ನಡಿಗೆ ಪಯಣ. ಇತ್ತ ಜೊಮ್ಮಯ್ಯನಾದರೋ ರೈತರೆಲ್ಲ ತನ್ನ ಮೇಲೆ ಮುನಿದು ಹೋದ ಮೇಲೆ ಆ ಹೊಲದಲ್ಲೇ ಪದ್ಮಾಸನ ಹಾಕಿ ಶಿವನಾಮ ಭಜಿಸುತ್ತ ಕುಳಿತುಬಿಟ್ಟ.

ಮೂರು ದಿನವಾದರೂ ಕಣ್ತೆರೆಯಲಿಲ್ಲ. ಚಾಡಿ ಹೇಳಿದ ರೈತರ ಗುಂಪು ಹಾಗೂ ರಾಜನ ಭಟರು ಹೊಲದ ಬಳಿ ಬಂದು ನೋಡಿ ಬೆರಗಾದರು. ಹತ್ತು ಎಕರೆ ಹೊಲದ ತುಂಬಾ ಕಡಲೆ ಪೈರೆದ್ದು ನಳನಿಳಿಸುತ್ತಿತ್ತು, ರಾಜ ಬರಗಾಲದ ಪ್ರಯುಕ್ತ ಅವರಿಗೆ ನೀಡಿದ್ದು ಬಲು ಕಡಿಮೆ. ಆ ಎರಡು ಎಕರೆಗೆ ಆಗುವಷ್ಟು ಮಾತ್ರ. ಪ್ರತಿ ಹಳ್ಳಿಗೆ ಎರಡು ಎಕರೆಗೆ ಬಿತ್ತುವಷ್ಟು ಬೀಜ ಮಾತ್ರ. ಅದು ಹಳ್ಳಿಯವರೆಲ್ಲರ ಸೊತ್ತೆಂದು ಎಚ್ಚರಿಸಿ ರಾಜನೀಡುತ್ತಿದ್ದ. ಜೊಮ್ಮಯ್ಯ ಅದರಲ್ಲಿ ಬಿತ್ತಿದ್ದು ಶರಣರು ತಿಂದುಳಿದ ಐದು ಕಾಳುಗಳು ಮಾತ್ರ. ಆದರೆ ಹತ್ತು ಎಕರೆಯುದ್ದಕ್ಕೂ ಪೈರೆದ್ದು ನಳನಳಿಸಿದೆ. ಶಿವನೊಲಿದ ಶಿವಭಕ್ತರ ಮಹಿಮೆ ಬಲ್ಲವರಾರು? ಆ ಮೇಲೆ ಎಲ್ಲರೂ ಜೊಮ್ಮಯ್ಯನ ಕಾಲಿಗೆ ಬೀಳುವವರೇ ಆ ವರ್ಷ ಇಳಿಹಾಳದಲ್ಲಿ ಬಂದ ಬೆಳೆ ಸುತ್ತಲಿನ ಹತ್ತು ಹಳ್ಳಿಯ ಕ್ಷಾಮ ನಿವಾರಿಸಿತು. —

# ಬೇಕು - ಬೇಡ

### ಭಾವಚಿತ್ರ ಬೇಕು

'ಸಿದ್ಧಗಂಗಾ' ಸಕಾಲಕ್ಕೆ ತಲುಪುತ್ತಿದೆ. ಲೇಖನಗಳು ಉತ್ತಮವಾಗಿವೆ.' 'ಶ್ರೀವಾಣಿ" ವಿಭಾಗ ಶ್ರೇಷ್ಠತಮವಾಗಿದೆ. ಆದರೆ ಆ ವಿಭಾಗದಲ್ಲಿ ಶ್ರೀ ಶ್ರೀಗಳವರ ಭಾವಚಿತ್ರವನ್ನು ಸೇರಿಸಿರಿ. ದಿವ್ಯವಾಣಿಯ ಜೊತೆಗೇ ಭವ್ಯ ಭಾವಚಿತ್ರವೂ ಸೇರಿದರೆ ಹೆಚ್ಚು ಪರಿಣಾಮಯುತವಾಗಿರುತ್ತದೆ.

—ದ್ವಾರನಹಳ್ಳಿ ಗುರುಮಲ್ಲಪ್ಪ
ಮಾಯಸಂದ್ರ

### ಸಕಾಲಕ್ಕೆ ತಲುಪಬೇಕು

ಉತ್ತಮ ಲೇಖನಗಳನ್ನೊಳಗೊಂಡು ಬರುತ್ತಿರುವ "ಸಿದ್ಧಗಂಗಾ'' ಕ್ಕೆ ಧನ್ಯವಾದಗಳು. ಅದು ಕಾಲಕಾಲಕ್ಕೆ ತಲುಪುವ ವ್ಯವಸ್ಥೆ ಮಾಡಿದರೆ ಓದುಗರಿಗೆ ಸಂತೋಷವೆನಿಸೀತು.

— ಮಹೇಶ, ಕುರುಬರಹಳ್ಳಿ.

### ಧಾರ್ಮಿಕ ಲೇಖನಗಳ ಗಣಿ :

'ಸಿದ್ಧಗಂಗಾ' ಮಾಸಿಕವನ್ನು ತಪ್ಪದೆ ಓದುವವರಲ್ಲಿ ನಾನೂ ಒಬ್ಬ. ತಮ್ಮ ಪತ್ರಿಕೆಯು ಉತ್ತಮವಾದ ವಿಚಾರಪೂರಿತವಾದ ಶೈಕ್ಷಣಿಕ ಹಾಗೂ ಧಾರ್ಮಿಕ ಲೇಖನಗಳ ಗಣಿ. ಇಂತಹ ಲೇಖನಗಳು ಧರ್ಮ ಜಾಗೃತಿಯ ಅವಶ್ಯಕತೆಯಿರುವ ಪ್ರಸ್ತುತ ಸಮಯಕ್ಕೆ ಉಪಯುಕ್ತವಾಗಿವೆಯೆಂದು ತಿಳಿಸಲು ತುಂಬಾ ಸಂತೋಷಿಸುತ್ತೇನೆ.

—ಎಸ್.ಕೆ. ಜಯಕುಮಾರ್,
ಸಿಂಗೀಪುರ.

### ಸೊಗಸಾಗಿ ಹೊರಬೀಳುತ್ತಿದೆ

ತಾವು ತಮ್ಮ ಪತ್ರಿಕೆಯಲ್ಲಿ ಓದುಗರ 'ಬೇಕು–ಬೇಡ' ಗಳಿಗೆ ಮನ್ನಣೆ ನೀಡಿ ಅದರಂತೆ ಪತ್ರಿಕೆಯನ್ನು ರೂಪಿಸಿಕೊಳ್ಳುತ್ತಿರುವುದು ನಮಗೆಲ್ಲರಿಗೂ ಸಂತೋಷವನ್ನುಂಟುಮಾಡಿದೆ. ಇತ್ತೀಚೆಗೆ ಪತ್ರಿಕೆಯು ತುಂಬಾ ಸೊಗಸಾಗಿ ಹೊರಬೀಳುತ್ತಿದೆ.

—ಡಿ. ಬಿ. ಸಿದ್ದಗಂಗಮ್ಮ
ದುಂಡ,
[ತುರುವೇಕೆರೆ ತಾಲ್ಲೂಕು]

### ಉತ್ತಮ ಲೇಖನಗಳಿವೆ.

ನಾನು ನವೆಂಬರ್ ತಿಂಗಳ 'ಸಿದ್ಧಗಂಗಾ' ಮಾಸಪತ್ರಿಕೆಯನ್ನು ಓದಿದೆ. ಮನಸ್ಸಿಗೆ ಬಹಳ ಆನಂದವಾಯಿತು. ಶ್ರೀ ಬಿ. ಎಸ್. ಸ್ವಾಮಿಯವರ 'ಜೀವನ ಮತ್ತು ಸ್ತ್ರೀ' ಲೇಖನ ತುಂಬಾ ಚೆನ್ನಾಗಿತ್ತು. ಉತ್ತಮ ಲೇಖನಗಳನ್ನು ಹೊತ್ತು ಹೊರಬರುತ್ತಿರುವ 'ಸಿದ್ಧಗಂಗಾ' ಕ್ಕೆ ಸದಾ ಶುಭವನ್ನೇ ಹಾರೈಸುವ.

—ಕುಮಾರಿ ಬಿ. ಸಿ. ಕಾತ್ಯಾಯಿನಿ
ಬೆಂಗಳೂರು

### ಸರಳಶೈಲಿಯ ಕಥೆಗಳು :

ತಮ್ಮ ಪತ್ರಿಕೆಯಲ್ಲಿ ಪ್ರಕಟವಾಗುತ್ತಿರುವ ಶ್ರೀಮತಿ ಹೆಚ್. ಎಸ್. ರಾಧಾದೇವಿಯವರ 'ಭುವಿಗಿಳಿದ ಶಿವ ತಾನು...............' ಲೇಖನಗಳು ತುಂಬಾ ಚೆನ್ನಾಗಿರುತ್ತವೆ. ಜನಸಾಮಾನ್ಯರಿಗೆ ಅರ್ಥವಾಗುವಂತಹ ಸರಳ ಶೈಲಿಯಲ್ಲಿ ಶಿವಶರಣರ ಕಥೆಗಳನ್ನು ಬರೆಯುವ ಅವರಿಗೆ ನನ್ನ ಧನ್ಯವಾದಗಳು.

—ಎಂ. ಎಸ್. ಶಂಕರಪ್ಪ
ಬೀರಸಂದ್ರ, [ಶಿಪಟೂರು ತಾಲ್ಲೂಕು]

SIDDAGANGA Reg No. KRN-Q-9

Registered with the Registrar of News Papers for India under No. 17189/69

# ಬಡವರ ಭಾಗ್ಯೋದಯ

ಭೂ ಸುಧಾರಣೆ ಶಾಸನವನ್ನು ಕಾರ್ಯಗತ ಮಾಡುತ್ತಿರುವುದರಿಂದ ಕರ್ನಾಟಕದಲ್ಲಿ ಸುಮಾರು 80 ಸಾವಿರ ಕುಟುಂಬಗಳು ಭೂಮಿಯನ್ನು ಪಡೆಯುವುವು. ಇವರಲ್ಲಿ 40 ಸಾವಿರ ಹರಿಜನ ಗಿರಿಜನ ಕುಟುಂಬಗಳು. ಇವಲ್ಲದೆ ಹತ್ತು ಹೇಕ್ಟೇರುಗಳಲ್ಲಿ ಸಾಗುವಳಿ ಮಾಡುತ್ತಿರುವ ಒಕ್ಕಲುಗಳಿಗೆ ಭೂ ಮಾಲೀಕತ್ವದ ಹಕ್ಕುಗಳನ್ನು ಕೊಡಲಾಗುವುದು.

## ಮನೆಯಿಲ್ಲದವರಿಗೆ ಮನೆ:

ವಾಸಕ್ಕೆ ಮನೆ ಇಲ್ಲದ ಕೃಷಿಕಾರ್ಮಿಕರಿಗೆ ರಾಜ್ಯದಲ್ಲಿ ಸುಮಾರು 5 ಲಕ್ಷ ನಿವೇಶನಗಳನ್ನು ಉಚಿತವಾಗಿ ಹಂಚಲಾಗಿದೆ. ಜನತಾ ಗೃಹ ನಿರ್ಮಾಣ ಯೋಜನೆಯನ್ವಯ 52 ಸಾವಿರಕ್ಕೂ ಮೀರಿ ಕಡಿಮೆ ವೆಚ್ಚದ ಮನೆಗಳನ್ನು ಕಟ್ಟುವ ಕಾರ್ಯವನ್ನು ಕೈಗೊಂಡಿದ್ದು ಈಗಾಗಲೇ ಇಂಥ 13,500 ಮನೆಗಳಲ್ಲಿ ಜನ ವಾಸಿಸಿ ಹಾಡಿ ಹರಸುತ್ತಿದ್ದಾರೆ.

## ಕಾರ್ಮಿಕರಿಗೆ ಹೆಚ್ಚಿನ ವೇತನ:

ಸುಮಾರು ಮೂವತ್ತುಮೂರು ಲಕ್ಷ ಕೆಲಸಗಾರರು ಅಕ್ಟೋಬರ್ 2,1975 ರಿಂದ ಕನಿಷ್ಠ ವೇತನ ಹೆಚ್ಚಳದ ಫಲವಾಗಿ ಅಧಿಕ ವೇತನ ಪಡೆಯುತ್ತಿದ್ದಾರೆ. ಅವರಲ್ಲಿ 27 ಲಕ್ಷ ಕೃಷಿ ಕಾರ್ಮಿಕರು, ಐದು ಲಕ್ಷ ಬೀಡಿ ಕಾರ್ಮಿಕರು ಮತ್ತು ಒಂದು ಲಕ್ಷ ಕಲ್ಲು ಕುಟಿಗರು ಮುಂತಾದವರಿದ್ದಾರೆ.

## ನೇಕಾರರಿಗೆ ನೆರವು:

ಕರ್ನಾಟಕ ಕೈಮಗ್ಗ ನೇಕಾರರ ಉದ್ದಿಮೆ ಅಭಿವೃದ್ಧಿ ಕಾರ್ಪೊರೇಷನ್ ರಚಿಸಲಾಗಿದೆ. ಕೈಮಗ್ಗದ ಉದ್ಯಮದಲ್ಲಿ ನಿರತರಾಗಿರುವವರಿಗೆ ಅದು ನೆರವಿತ್ತು ಈ ಉದ್ದಿಮೆಯನ್ನು ಪುನರುಜ್ಜೀವಗೊಳಿಸುವುದು.

ಅಮಾನುಷ ಜೀತ ಪದ್ಧತಿಯನ್ನು ತೊಡೆದು ಹಾಕಲಾಗಿದೆ.

ಸಹಕಾರಿ, ಸರ್ಕಾರ ಮತ್ತು ಸಾರ್ವಜನಿಕ ಆರ್ಥಿಕ ಸಂಸ್ಥೆಗಳಿಗೆ ಮರಳಿ ಮುಟ್ಟಿಸಬೇಕಾದ ಸಾಲಗಳನ್ನು ಉಳಿದು ಇತರೆ ಸಾಲಗಳ ಭಾರದಿಂದ ವಾರ್ಷಿಕ ಆದಾಯ 2,400 ರೂ. ಮೀರದ ಸಣ್ಣ ರೈತರು, ಕೃಷಿ ಕಾರ್ಮಿಕರು ಮತ್ತಿತರ ದುರ್ಬಲ ವರ್ಗದವರನ್ನು ಮುಕ್ತಗೊಳಿಸಲಾಗಿದೆ.

ಪ್ರಧಾನ ಮಂತ್ರಿ ಶ್ರೀಮತಿ ಇಂದಿರಾ ಗಾಂಧಿಯವರು 20 ಅಂಶಗಳ ಕಾರ್ಯಕ್ರಮ ಜಾರಿಗೆ ತರುವಲ್ಲಿ ಕರ್ನಾಟಕ ಕೈಗೊಂಡಿರುವ ಅನೇಕ ಕಾರ್ಯಕ್ರಮಗಳಲ್ಲಿ ಇವು ಕೆಲವು ಮಾತ್ರ.

ಪ್ರಕಟಣೆ

ನಿರ್ದೇಶಕರು, ವಾರ್ತಾ ಮತ್ತು ಪ್ರಚಾರ ಇಲಾಖೆ, ಕರ್ನಾಟಕ ಸರಕಾರ,
ಬೆಂಗಳೂರು.

ಶ್ರೀ ಸಿದ್ಧಲಿಂಗೇಶ್ವರ ಸ್ವಾಮಿ ಮುದ್ರಣಾಲಯ, ಶ್ರೀ ಸಿದ್ಧಗಂಗಾ ಮಠ